**ಕರ್ನಾಟಕ ಸರ್ಕಾರ**

ಸಂಖ್ಯೆ: ವಇ 47 ಹೆಚ್ಎಎಂ 2019

ಕರ್ನಾಟಕ ಸರ್ಕಾರದ ಸಚಿವಾಲಯ
ವಿಕಾಸಸೌಧ.
ಬೆಂಗಳೂರು, ದಿನಾಂಕ:12.02.2019.

01
[illegible]
13/2/19

ಇಂದ:

ಸರ್ಕಾರದ ಕಾರ್ಯದರ್ಶಿ
ವಸತಿ ಇಲಾಖೆ
ಬೆಂಗಳೂರು.

ಇವರಿಗೆ:

ಕಾರ್ಯದರ್ಶಿ,
ಕರ್ನಾಟಕ ವಿಧಾನ ಸಭೆ,
ವಿಧಾನಸೌಧ.

ಮಾನ್ಯರೆ,

ವಿಷಯ: ಕರ್ನಾಟಕ ವಿಧಾನ ಸಭೆಯ ಚುಕ್ಕೆ ಗುರುತಿನ ಪ್ರಶ್ನೆ ಸಂಖ್ಯೆ: 483ಕ್ಕೆ ಉತ್ತರಿಸುವ ಬಗ್ಗೆ.
ಉಲ್ಲೇಖ:ಕಾರ್ಯದರ್ಶಿ, ಕರ್ನಾಟಕ ವಿಧಾನ ಸಭೆಯ ಪತ್ರ ಸಂಖ್ಯೆ: ಪ್ರಶಾವಿಸ/15ನೇವಿಸ/3ಅ/ಪ್ರ.ಸಂ. 483/2019 ದಿನಾಂಕ:05.02.2019.

ಮಾನ್ಯ ವಿಧಾನ ಸಭೆಯ ಸದಸ್ಯರಾದ ಮಾನ್ಯ ಶ್ರೀ ಬಾಲಕೃಷ್ಣ. ಎ. ವಿ. ಇವರ ಚುಕ್ಕೆ ಗುರುತಿನ ಪ್ರಶ್ನೆ ಸಂಖ್ಯೆ: 483 ಕ್ಕೆ ಉತ್ತರದ 350 ಪ್ರತಿಗಳನ್ನು ಇದರೊಂದಿಗೆ ಲಗತ್ತಿಸಿ ಮುಂದಿನ ಕ್ರಮಕ್ಕಾಗಿ ಕಳುಹಿಸಲು ನಿರ್ದೇಶಿತನಾಗಿದ್ದೇನೆ.

ತಮ್ಮ ವಿಶ್ವಾಸಿ,
S. Venkatesh
(ವೆಂಕಟೇಶ್ ಎಸ್.)
ಸರ್ಕಾರದ ಅಧೀನ ಕಾರ್ಯದರ್ಶಿ-2,
ವಸತಿ ಇಲಾಖೆ

ಕರ್ನಾಟಕ ವಿಧಾನಸಭೆ

| | |
|---|---|
| ವಿಧಾನ ಸಭೆ ಸದಸ್ಯರ ಹೆಸರು : | ಮಾನ್ಯ ಶ್ರೀ ಬಾಲಕೃಷ್ಣ ಸಿ.ಎಸ್. |
| ಚುಕ್ಕೆ ಗುರುತಿನ ಪ್ರಶ್ನೆ ಸಂಖ್ಯೆ : | 483 |
| ಉತ್ತರಿಸಬೇಕಾದ ದಿನಾಂಕ : | 13.02.2019 |
| ಉತ್ತರಿಸುವ ಸಚಿವರು | ಮಾನ್ಯ ವಸತಿ ಸಚಿವರು |

| | ಪ್ರಶ್ನೆ | ಉತ್ತರ |
|---|---|---|
| ಅ) | ರಾಜ್ಯದಲ್ಲಿ 2017-18ನೇ ಸಾಲಿನಲ್ಲಿ ಆಶ್ರಯ ಯೋಜನೆಯಡಿ ಎಷ್ಟು ಮನೆಗಳ ಗುರಿಯನ್ನು ನೀಡಲಾಗಿತ್ತು; ಇದುವರೆಗೂ ಹಂಚಿಕೆ ಮಾಡಲಾದ ಮನೆಗಳೆಷ್ಟು; (ವರ್ಗವಾರು ಮತ್ತು ಜಿಲ್ಲಾವಾರು ಸಂಪೂರ್ಣ ವಿವರಗಳನ್ನು ನೀಡುವುದು) | ರಾಜ್ಯದಲ್ಲಿ 2017-18ನೇ ಸಾಲಿನ ಆಶ್ರಯ ಯೋಜನೆಯಡಿ ಹಂಚಿಕೆಯಾದ ಮನೆಗಳ ವಿವರ ಈ ಕೆಳಗಿನಂತಿದೆ. ಜಿಲ್ಲಾವಾರು ವಿವರಗಳನ್ನು ಅನುಬಂಧದಲ್ಲಿ ಲಗತ್ತಿಸಿದೆ. (ಕೆಳಗಿನ ಕೋಷ್ಟಕ ನೋಡಿ) |

| ಕ್ರ. ಸಂ | ಯೋಜನೆಗಳ ವಿವರ | ಗುರಿ | ಹಂಚಿಕೆ |
|---|---|---|---|
| 1 | ಬಸವ ವಸತಿ ಯೋಜನೆ | 394029 | 350119 |
| 2 | ವಾಜಪೇಯಿ ನಗರ ವಸತಿ ಯೋಜನೆ * | 50000 | 28126 |
| | ಒಟ್ಟು | 444029 | 378245 |

* 2017-18 ನೇ ಸಾಲಿಗೆ 100000 ಮನೆಗಳನ್ನು ಸರ್ಕಾರವು ನೀಡಿದ್ದು, 50000 ಮನೆಗಳನ್ನು ನಗರ ಸ್ಥಳೀಯ ಸಂಸ್ಥೆಗಳಿಗೆ; 25000 ಮನೆಗಳನ್ನು ಕರ್ನಾಟಕ ಕೊಳಗೇರಿ ಅಭಿವೃದ್ಧಿ ಮಂಡಳಿಗೆ ಮತ್ತು 25000 ಮನೆಗಳನ್ನು ಲಂಬೀಯಕಟ್ಟಡ ವಸತಿ ನಿರ್ಮಾಣ ಯೋಜನೆಗಳಿಗೆ ವಿವಿಧ ನಗರ ಸ್ಥಳೀಯ ಸಂಸ್ಥೆಗೆ ನೀಡಲಾಗಿದೆ.

| | ಪ್ರಶ್ನೆ | ಉತ್ತರ |
|---|---|---|
| ಆ) | ಹಾಸನ ಜಿಲ್ಲೆಯ ಚನ್ನರಾಯ ಪಟ್ಟಣ ತಾಲ್ಲೂಕಿಗೆ ಹಂಚಿಕೆ ಮಾಡಲಾದ ಮನೆಗಳೆಷ್ಟು; ಬಾಕಿ ಇರುವ ಮನೆಗಳೆಷ್ಟು; ಬಾಕಿ ಉಳಿಯಲು ಕಾರಣಗಳೇನು; (ವಿವರ ನೀಡುವುದು) | ಚನ್ನರಾಯಪಟ್ಟಣ ತಾಲ್ಲೂಕಿಗೆ ಹಂಚಿಕೆ ಮಾಡಲಾದ ವಿವರ ಈ ಕೆಳಗಿನಂತಿದೆ. (ಕೆಳಗಿನ ಕೋಷ್ಟಕ ನೋಡಿ) |

| ಕ್ರ. ಸಂ | ಯೋಜನೆಗಳ ವಿವರ | ಗುರಿ | ಹಂಚಿಕೆ | ಬಾಕಿ |
|---|---|---|---|---|
| 1 | ಬಸವ ವಸತಿ ಯೋಜನೆ | 3798 | 3171 | 627 |
| 2 | ವಾಜಪೇಯಿ ನಗರ ವಸತಿ ಯೋಜನೆ | 250 | 95 | 155 |
| | ಒಟ್ಟು | 4048 | 3266 | 782 |

ಚನ್ನರಾಯಪಟ್ಟಣ ತಾಲ್ಲೂಕಿಗೆ ಬಸವ ವಸತಿ ಯೋಜನೆಯಡಿ ಮತ್ತು ವಾಜಪೇಯಿ ನಗರ ವಸತಿ ಯೋಜನೆಯಡಿ ಮಂಜೂರು ಮಾಡಲಾದ ಗುರಿಗೆ ಎದುರಾಗಿ ಫಲಾನುಭವಿಗಳನ್ನು ಆಯ್ಕೆ ಮಾಡಲು ಸಾಕಷ್ಟು ಕಾಲಾವಾಕಾಶ ನೀಡಿದ್ದರೂ ಕೂಡ ಇನ್ನು 782 ಮನೆಗಳಿಗೆ ಫಲಾನುಭವಿಗಳನ್ನು ಆಯ್ಕೆ ಮಾಡಿರುವುದಿಲ್ಲ.

| ಇ) | ಚನ್ನರಾಯಪಟ್ಟಣ ತಾಲ್ಲೂಕಿಗೆ ಹಂಚಿಕೆಯಾದ ಮನೆಗಳ ಪೈಕಿ ಇದುವರೆಗೂ ಎಷ್ಟು ಮನೆಗಳಿಗೆ ಹಣ ಪಾವತಿಸಲಾಗಿದೆ; ಹಣ ಪಾವತಿಗೆ ಬಾಕಿ ಇರುವ ಮನೆಗಳೆಷ್ಟು, ಬಾಕಿ ಉಳಿಯಲು ಕಾರಣವೇನು? (ಸಂಪೂರ್ಣ ವಿವರಗಳನ್ನು ನೀಡುವುದು) | ಎಲ್ಲಾ ವಸತಿ ಯೋಜನೆಗಳಿಗೆ ಪ್ರತಿ ವಾರವು ಜಿಪಿಎಸ್ ಆಧಾರಿತ ಭೌತಿಕ ಪ್ರಗತಿಗೆ ಅನುಗುಣವಾಗಿ ಅರ್ಹ ಫಲಾನುಭವಿಗಳ ಖಾತೆಗೆ ನೇರವಾಗಿ ಅನುದಾನ ಬಿಡುಗಡೆ ಮಾಡಲಾಗಿದೆ.<br><br>ಕಳೆದ ಒಂದು ತಿಂಗಳನಿಂದ ಮಾತ್ರ ಚನ್ನರಾಯಪಟ್ಟಣ ತಾಲ್ಲೂಕಿಗೆ ಬಸವ ವಸತಿ ಯೋಜನೆಯಲ್ಲಿ ಅನುದಾನವನ್ನು ಪಾವತಿ ಮಾಡಲು ರೂ.3.47 ಕೋಟಿಗಳು ಬಾಕಿ ಇದ್ದು, ಅನುದಾನ ಬಿಡುಗಡೆಗೆ ಕ್ರಮವಹಿಸಲಾಗುವುದು. |
|---|---|---|

ವಇ 27 ಹೆಚ್ಎಎಂ 2019

(ಎನ್ ನಾಗರಾಜು ಎಂಟಿಬಿ)
ವಸತಿ ಸಚಿವರು

Annexure - 1

LAQ - 483

Target & Selection List under Basava Housing Scheme 2017-18

| District | Target | | | Admin Approvel | | | Pending for Approvel | | |
|---|---|---|---|---|---|---|---|---|---|
| | GEN | MIN | TOTAL | GEN | MIN | TOTAL | GEN | MIN | TOTAL |
| Bagalkot | 13139 | 1149 | 14288 | 12612 | 976 | 13588 | 527 | 173 | 700 |
| Ballari | 11501 | 1044 | 12545 | 9402 | 720 | 10122 | 2099 | 324 | 2423 |
| Belagavi | 33868 | 2814 | 36682 | 31767 | 2423 | 34190 | 2101 | 391 | 2492 |
| Bengaluru Rural | 5470 | 633 | 6103 | 5406 | 444 | 5850 | 64 | 189 | 253 |
| Bengaluru Urban | 6492 | 736 | 7228 | 4161 | 301 | 4462 | 2331 | 435 | 2766 |
| Bidar | 10078 | 988 | 11066 | 9095 | 881 | 9976 | 983 | 107 | 1090 |
| Chamarajanagar | 8277 | 748 | 9025 | 7955 | 236 | 8191 | 322 | 512 | 834 |
| Chikkaballapur | 8298 | 750 | 9048 | 7377 | 460 | 7837 | 921 | 290 | 1211 |
| Chikkamagaluru | 6957 | 633 | 7590 | 6234 | 341 | 6575 | 723 | 292 | 1015 |
| Chitradurga | 11131 | 1090 | 12221 | 9135 | 451 | 9586 | 1996 | 639 | 2635 |
| DakshinaKannada | 6507 | 2598 | 9105 | 6133 | 2099 | 8232 | 374 | 499 | 873 |
| Davanagere | 11457 | 914 | 12371 | 10107 | 583 | 10690 | 1350 | 331 | 1681 |
| Dharwad | 7784 | 804 | 8588 | 7359 | 731 | 8090 | 425 | 73 | 498 |
| Gadag | 5796 | 577 | 6373 | 5429 | 504 | 5933 | 367 | 73 | 440 |
| Hassan | 16506 | 1443 | 17949 | 15434 | 556 | 15990 | 1072 | 887 | 1959 |
| Haveri | 13031 | 1221 | 14252 | 12499 | 982 | 13481 | 532 | 239 | 771 |
| Kalaburagi | 13141 | 1280 | 14421 | 10155 | 989 | 11144 | 2986 | 291 | 3277 |
| Kodagu | 3724 | 348 | 4072 | 2781 | 277 | 3058 | 943 | 71 | 1014 |
| Kolar | 11864 | 1150 | 13014 | 11414 | 783 | 12197 | 450 | 367 | 817 |
| Koppal | 8434 | 706 | 9140 | 7747 | 620 | 8367 | 687 | 86 | 773 |
| Mandya | 21558 | 869 | 22427 | 20783 | 198 | 20981 | 775 | 671 | 1446 |
| Mysuru | 23151 | 1300 | 24451 | 21597 | 612 | 22209 | 1554 | 688 | 2242 |
| Raichur | 7555 | 737 | 8292 | 5517 | 441 | 5958 | 2038 | 296 | 2334 |
| Ramanagara | 13416 | 888 | 14304 | 12590 | 380 | 12970 | 826 | 508 | 1334 |
| Shivamogga | 10068 | 1069 | 11137 | 9730 | 887 | 10617 | 338 | 182 | 520 |
| Tumakuru | 23738 | 1590 | 25328 | 23585 | 1049 | 24634 | 153 | 541 | 694 |
| Udupi | 8529 | 811 | 9340 | 6250 | 510 | 6760 | 2279 | 301 | 2580 |
| UttaraKannada | 12197 | 1159 | 13356 | 11424 | 704 | 12128 | 773 | 455 | 1228 |
| Vijayapura | 23438 | 1938 | 25376 | 20676 | 1724 | 22400 | 2762 | 214 | 2976 |
| Yadgiri | 4472 | 465 | 4937 | 3580 | 323 | 3903 | 892 | 142 | 1034 |
| **Total** | **361577** | **32452** | **394029** | **327934** | **22185** | **350119** | **33643** | **10267** | **43910** |

D. Ravi[illegible]

LAQ-483 Annexure2

| Vajapayee Urban Houusing Scheme 2017-18 | | |
|---|---|---|
| District | Target | Beneficiaries Selected |
| Bagalkot | 3009 | 2098 |
| Ballari | 5631 | 1433 |
| Belagavi | 4544 | 2732 |
| Bengaluru Rural | 869 | 772 |
| Bengaluru Urban | 343 | 138 |
| Bidar | 1469 | 1290 |
| Chamarajanagar | 1230 | 866 |
| Chikkaballapur | 839 | 505 |
| Chikkamagaluru | 940 | 285 |
| Chitradurga | 636 | 332 |
| DakshinaKannada | 1407 | 661 |
| Davanagere | 2320 | 957 |
| Dharwad | 2712 | 818 |
| Gadag | 1808 | 401 |
| Hassan | 577 | 317 |
| Haveri | 1264 | 896 |
| Kalaburagi | 1292 | 952 |
| Kodagu | 167 | 110 |
| Kolar | 1248 | 534 |
| Koppal | 1996 | 1277 |
| Mandya | 505 | 320 |
| Mysuru | 2731 | 1613 |
| Raichur | 1513 | 923 |
| Ramanagara | 949 | 493 |
| Shivamogga | 2380 | 1093 |
| Tumakuru | 2010 | 752 |
| Udupi | 934 | 624 |
| UttaraKannada | 741 | 560 |
| Vijayapura | 4573 | 3859 |
| Yadagiri | 1019 | 515 |
| **Grand Total** | **50000** | **28126** |

Asha S



**ಕರ್ನಾಟಕ ಸರ್ಕಾರ**

ಸಂಖ್ಯೆ: ನಅಇ 44 ಮೈಅಪ್ರಾ 2019

ಕರ್ನಾಟಕ ಸರ್ಕಾರದ ಸಚಿವಾಲಯ,
ವಿಕಾಸ ಸೌಧ,
ಬೆಂಗಳೂರು, ದಿನಾಂಕ: 12.02.2019.

02
Stad
13/2/19

ಇಂದ,
ಸರ್ಕಾರದ ಕಾರ್ಯದರ್ಶಿಗಳು,
ನಗರಾಭಿವೃದ್ಧಿ ಇಲಾಖೆ,
ಬೆಂಗಳೂರು.

ಇವರಿಗೆ,
ಕಾರ್ಯದರ್ಶಿಗಳು,
ಕರ್ನಾಟಕ ವಿಧಾನಸಭೆ,
ಬೆಂಗಳೂರು.

ಮಾನ್ಯರೇ,

ವಿಷಯ: ಕರ್ನಾಟಕ ವಿಧಾನಸಭೆ ಚುಕ್ಕೆ ಗುರುತಿನ ಪ್ರಶ್ನೆ 644ಕ್ಕೆ ಉತ್ತರಿಸುವ ಬಗ್ಗೆ.

* * * *

ಮೇಲ್ಕಂಡ ವಿಷಯಕ್ಕೆ ಸಂಬಂಧಿಸಿದಂತೆ, ಕರ್ನಾಟಕ ವಿಧಾನಸಭೆ ಸದಸ್ಯರಾದ ಶ್ರೀ ಪಾಟೀಲ್ ಸಿ.ಸಿ (ನರಗುಂದ) ಇವರ ಚುಕ್ಕೆ ಗುರುತಿನ ಪ್ರಶ್ನೆ ಸಂಖ್ಯೆ: 644ಕ್ಕೆ ಉತ್ತರದ 350 ಪ್ರತಿಗಳನ್ನು ಮುಂದಿನ ಸೂಕ್ತ ಕ್ರಮಕ್ಕಾಗಿ ಇದರೊಂದಿಗೆ ಲಗತ್ತಿಸಿ ಕಳುಹಿಸಲಾಗಿದೆ.

ತಮ್ಮ ವಿಶ್ವಾಸಿ,

N. mangalage
(ಎನ್.ಮಂಗಳಗೌರಿ)
ಶಾಖಾಧಿಕಾರಿ(ಮಂಡಳಿ ಶಾಖೆ),
ನಗರಾಭಿವೃದ್ಧಿ ಇಲಾಖೆ.



# ಕರ್ನಾಟಕ ವಿಧಾನ ಸಭೆ

| | | |
|---|---|---|
| ಸದಸ್ಯರ ಹೆಸರು | : | ಪಾಟೀಲ್ ಸಿ.ಸಿ. (ನರಗುಂದ) |
| ಚುಕ್ಕೆ ಗುರುತಿನ ಪ್ರಶ್ನೆ ಸಂಖ್ಯೆ | : | 644 |
| ಉತ್ತರಿಸಬೇಕಾದ ದಿನಾಂಕ | : | 13.02.2019 |
| ಉತ್ತರಿಸಬೇಕಾದವರು | : | ನಗರಾಭಿವೃದ್ಧಿ ಸಚಿವರು. |

| ಕ್ರಮ ಸಂಖ್ಯೆ | ಪ್ರಶ್ನೆ | ಉತ್ತರ |
|---|---|---|
| ಅ) | ರಾಜ್ಯಾದ್ಯಂತ ಕರ್ನಾಟಕ ನಗರ ಮತ್ತು ಗ್ರಾಮಾಂತರ ಯೋಜನಾ ಇಲಾಖೆ ವ್ಯಾಪ್ತಿಯಲ್ಲಿ ಬರುವ ಖಾಸಗಿ ಬಡಾವಣೆಗಳಲ್ಲಿ ಕಟ್ಟಡ ಪರವಾನಗಿ ವಿಷಯಕ್ಕೆ ಸಂಬಂಧಿಸಿದಂತೆ ತಾಂತ್ರಿಕ ಅಭಿಪ್ರಾಯವನ್ನು ನೀಡಬಾರದೆಂದು ನಿರ್ದೇಶನ ನೀಡಿರುವುದು ಸರ್ಕಾರದ ಗಮನಕ್ಕೆ ಬಂದಿದೆಯೇ? | ಹೌದು.<br><br>ಆದರೆ, ಭೂ ಪರಿವರ್ತನೆಗೊಂಡ ಜಮೀನುಗಳಿಗೆ ಸಕ್ಷಮ ಪ್ರಾಧಿಕಾರದಿಂದ ನಿಯಮಾನುಸಾರ ಅನುಮೋದನೆ ಪಡೆದಿರುವ ವಿನ್ಯಾಸಗಳಲ್ಲಿನ ನಿವೇಶನಗಳಿಗೆ ಕಟ್ಟಡ ಪರವಾನಿಗೆ ಸಂಬಂಧ ತಾಂತ್ರಿಕ ಅಭಿಪ್ರಾಯ ನೀಡಲು ಯಾವುದೇ ನಿರ್ಬಂಧವಿರುವುದಿಲ್ಲ. |
| ಆ) | ಹಾಗಿದ್ದಲ್ಲಿ, ಯಾವಾಗಿನಿಂದ ಈ ನಿರ್ದೇಶನ ಜಾರಿಗೊಳಿಸಲಾಗಿದೆ (ಆದೇಶ/ಸುತ್ತೋಲೆ ಪ್ರತಿಯೊಂದಿಗೆ ಸಂಪೂರ್ಣ ವಿವರ ನೀಡುವುದು); | ದಿ:08-12-1976ರ ನಂತರ ವಿನ್ಯಾಸ ನಕ್ಷೆ ಅನುಮೋದನೆ ಪಡೆಯದೇ ಅನಧಿಕೃತವಾಗಿ ವಿಭಜಿಸಿ ಸ್ಥಳೀಯ ಸಂಸ್ಥೆಯಲ್ಲಿ ಖಾತೆ ತೆರೆದಿರುವ ನಿವೇಶನಗಳಿಗೆ ಕಟ್ಟಡ ಪರವಾನಗಿ ಸಂಬಂಧ ತಾಂತ್ರಿಕ ಅಭಿಪ್ರಾಯ ನೀಡಲು ಅವಕಾಶವಿರುವುದಿಲ್ಲ. ದಿ:04-05-2017ರ ಸುತ್ತೋಲೆಯಲ್ಲಿ ತಾಂತ್ರಿಕ ಅಭಿಪ್ರಾಯ ನೀಡುವ ಕುರಿತು ಅಗತ್ಯ ನಿರ್ದೇಶನ ನೀಡಲಾಗಿರುತ್ತದೆ (ಪ್ರತಿ ಲಗತ್ತಿಸಿದೆ). |
| ಇ) | 2016 ಕ್ಕಿಂತ ಪೂರ್ವದಲ್ಲಿ ಇಂತಹ ಬಡಾವಣೆಗಳಲ್ಲಿ ಕಟ್ಟಡ ಪರವಾನಗಿಯನ್ನು ನೀಡಲಾಗುತ್ತಿದ್ದು, ನಂತರ ಅರ್ಜಿ ಸಲ್ಲಿಸಿದವರಿಗೆ ಪರವಾನಗಿ ನೀಡಲು ಬರುವುದಿಲ್ಲವೆಂದು ಹಿಂಬರಹ ನೀಡುತ್ತಿರುವುದು ಸರ್ಕಾರದ ಗಮನಕ್ಕೆ ಬಂದಿದೆಯೇ: | ಕರ್ನಾಟಕ ಪೌರ ಕಾಯ್ದೆ, 1964ರ ಕಲಂ 387 ದಿ:08-12-1976 ರಂದು ಜಾರಿಗೆ ಬಂದ ನಂತರವೂ ಕೆಲವೊಂದು ಪ್ರಕರಣಗಳಲ್ಲಿ ವಿನ್ಯಾಸ ನಕ್ಷೆ ಅನುಮೋದನೆ ಪಡೆಯದೇ ಸ್ಥಳೀಯ ಸಂಸ್ಥೆಯಲ್ಲಿ ಖಾತೆ ತೆರೆಯಲಾಗಿದ್ದು, ದಿ:08-12-1976 ರಿಂದ ಆಯಾ ಸ್ಥಳೀಯ ಯೋಜನಾ ಪ್ರದೇಶ ಘೋಷಿಸಿದ ದಿನಾಂಕದವರೆಗೆ ಸ್ಥಳೀಯ ಸಂಸ್ಥೆಯಲ್ಲಿ ಖಾತೆ ತೆರೆದಿರುವ ನಿವೇಶನಗಳಲ್ಲಿ ಕಟ್ಟಡ ಪರವಾನಿಗೆ ನೀಡಲು ತಾಂತ್ರಿಕ ಅಭಿಪ್ರಾಯ ನೀಡುವ ಕುರಿತು ಹಾಗೂ ಮೇಲ್ಕಂಡ ಸುತ್ತೋಲೆ ಅನುಷ್ಠಾನಗೊಳಿಸುವಲ್ಲಿ ಸಾರ್ವಜನಿಕರಿಗೆ |
| ಈ) | ಹಾಗಿದ್ದಲ್ಲಿ, 2016 ರ ಪೂರ್ವ ಹಾಗೂ ನಂತರದಲ್ಲಿ ಅರ್ಜಿ ಸಲ್ಲಿಸಿದ ಸಾರ್ವಜನಿಕರಿಗೆ ತಾರತಮ್ಯ ಮಾಡಿದಂತಾಗುವುದಿಲ್ಲವೇ (ವಿವರ ನೀಡುವುದು); | |

| | | |
|---|---|---|
| | — | ಆಗುತ್ತಿರುವ ಸಮಸ್ಯೆಗಳ ಹಿನ್ನೆಲೆಯಲ್ಲಿ, ಕಾನೂನು ಇಲಾಖೆಯ ಅಭಿಪ್ರಾಯ ಕೋರಲಾಗಿದ್ದು, ಅಕ್ರಮ-ಸಕ್ರಮ ಯೋಜನೆಗೆ ಮಾನ್ಯ ಸರ್ವೋಚ್ಚ ನ್ಯಾಯಾಲಯದ ತಡೆಯಾಜ್ಞೆ ಇರುವುದರಿಂದ ಈ ಹಂತದಲ್ಲಿ ಇಂತಹ ಪ್ರಕರಣಗಳ ಕುರಿತು ಕ್ರಮಕೈಗೊಳ್ಳಲು ಅವಕಾಶವಿರುವುದಿಲ್ಲವೆಂದು ಕಾನೂನು ಇಲಾಖೆಯು ಅಭಿಪ್ರಾಯ ನೀಡಿರುತ್ತದೆ. ಪ್ರಸ್ತುತದಲ್ಲಿ, ಸದರಿ ಸುತ್ತೋಲೆಗಳ ಕುರಿತು ಅಡ್ವೋಕೇಟ್ ಜನರಲ್ ಇವರ ಅಭಿಪ್ರಾಯ ಕೋರಲಾಗಿದ್ದು, ಸದರಿಯವರಿಂದ ಅಭಿಪ್ರಾಯವನ್ನು ನಿರೀಕ್ಷಿಸಲಾಗಿದೆ. |
| ಉ) | ಸರ್ಕಾರದ ವಸತಿ ಯೋಜನೆಗಳಲ್ಲಿ ಆಯ್ಕೆಯಾದ ಫಲಾನುಭವಿಗಳ ನಿವೇಶನಗಳೂ ಕೂಡಾ ಇಂತಹ ಬಡಾವಣೆಗಳಲ್ಲಿದ್ದು ಫಲಾನುಭವಿಗಳಿಗೆ ಕಟ್ಟಡ ಪರವಾನಗಿ ದೊರೆಯದಿರುವುದರಿಂದ ಇವರುಗಳು ವಸತಿ ಯೋಜನೆಗಳಿಂದ ವಂಚಿತರಾಗುವುದಿಲ್ಲವೇ; | ಸರ್ಕಾರದ ಯೋಜನೆಗಳು/ ಸರ್ಕಾರದಿಂದ ಅನುಮೋದನೆ -ಯಾಗಿರುವ ಯೋಜನೆಗಳಿಗೆ ಸಕ್ಷಮ ಪ್ರಾಧಿಕಾರದಿಂದ ವಿನ್ಯಾಸ ಅನುಮೋದನೆ ಪಡೆಯದಿದ್ದಂತಹ ಸಂದರ್ಭಗಳಲ್ಲಿ ಅನುಸರಿಸಬೇಕಾದ ಕ್ರಮದ ಬಗ್ಗೆ ಏಕ ರೂಪವಾಗಿ ಅನ್ವಯವಾಗುವಂತಹ ನಿರ್ದೇಶನ ನೀಡುವ ಸಂಬಂಧ ಪರಿಶೀಲಿಸಲಾಗುವುದು. |
| ಊ) | ಹಾಗಿದ್ದಲ್ಲಿ, ಇದನ್ನು ಸರಿಪಡಿಸಲು ಸರ್ಕಾರವು ಕೈಗೊಂಡಿರುವ ಕ್ರಮಗಳೇನು (ಸಂಪೂರ್ಣ ಮಾಹಿತಿ ನೀಡುವುದು)? | |

ಸಂಖ್ಯೆ: ನಅಇ 44 ಮೈಅಪ್ರಾ 2019

(ಯು.ಟಿ. ಖಾದರ್)
ನಗರಾಭಿವೃದ್ಧಿ ಸಚಿವರು

ನಗರ ಮತ್ತು ಗ್ರಾಮಾಂತರ ಯೋಜನಾ ನಿರ್ದೇಶಕರು
ಕರ್ನಾಟಕ ಸರ್ಕಾರ
ಬಹುಮಹಡಿಗಳ ಕಟ್ಟಡ, ಗೇಟ್-4
[illegible]
ಡಾ|| ಬಿ.ಆರ್. ಅಂಬೇಡ್ಕರ್ ವೀಧಿ
ಬೆಂಗಳೂರು-560 001
ದೂರವಾಣಿ ಸಂ. : 080-22258983

ಕರ್ನಾಟಕ ಸರ್ಕಾರ
ನಗರ ಮತ್ತು ಗ್ರಾಮಾಂತರ ಯೋಜನಾ ಇಲಾಖೆ

ಸಂಖ್ಯೆ:ನಗ್ರಾಯೋನಿ:ಕಟ್ಟಡ ಪರವಾನಿಗೆ:ಸುತ್ತೋಲೆ:2015-16

0 4 MAY 2017

## ಸುತ್ತೋಲೆ

ವಿಷಯ:- ಕರ್ನಾಟಕ ನಗರ ಮತ್ತು ಗ್ರಾಮಾಂತರ ಯೋಜನಾ ಕಾಯ್ದೆ 1961ರನ್ವಯ ನಗರ/ಪಟ್ಟಣಗಳಿಗೆ ಸ್ಥಳೀಯ ಯೋಜನಾ ಪ್ರದೇಶವೆಂದು ಘೋಷಿಸುವ ಮುಂಚಿತವಾಗಿಯೇ ಭೂ ಪರಿವರ್ತನೆಯಾದ ಜಮೀನುಗಳನ್ನು ವಿಭಜಿಸಿ ಸ್ಥಳೀಯ ಸಂಸ್ಥೆಯಲ್ಲಿ ಖಾತೆ ತೆರೆದಿರುವ ನಿವೇಶನಗಳಿಗೆ ಕಟ್ಟಡ ನಿರ್ಮಾಣ ಮಾಡುವ ಸಂಬಂಧ ತಾಂತ್ರಿಕ ಅಭಿಪ್ರಾಯ ನೀಡುವ ಬಗ್ಗೆ.

ಉಲ್ಲೇಖ:- 1) ಈ ಕಛೇರಿಯಿಂದ ಹೊರಡಿಸಿರುವ ಸುತ್ತೋಲೆ ಸಂ:ನಗ್ರಾಯೋನಿ/ಕಟ್ಟಡ ಪರವಾನಿಗೆ/ಸುತ್ತೋಲೆ/2015-16 ದಿನಾಂಕ:22-01-2016.
2) ದಿನಾಂಕ:24-01-2017 ರಂದು ಸರ್ಕಾರದ ಕಾರ್ಯದರ್ಶಿಗಳು, ನಗರಾಭಿವೃದ್ಧಿ ಇಲಾಖೆ ರವರ ಅಧ್ಯಕ್ಷತೆಯಲ್ಲಿ ನಡೆದ ಸಭೆ ನಡಾವಳಿ.

*********

ಉಲ್ಲೇಖ (1)ರ ಸುತ್ತೋಲೆಯಲ್ಲಿ ಕರ್ನಾಟಕ ನಗರ ಮತ್ತು ಗ್ರಾಮಾಂತರ ಯೋಜನಾ ಕಾಯ್ದೆ 1961ರನ್ವಯ ನಗರ/ಪಟ್ಟಣಗಳಿಗೆ ಪ್ರಾಧಿಕಾರ ರಚನೆಯ ಪೂರ್ವದಲ್ಲಿ ಹಾಗೂ ರಚನೆ ನಂತರ ಭೂ ಪರಿವರ್ತನೆಯಾದ ಜಮೀನುಗಳಿಗೆ ಸಂಬಂಧಪಟ್ಟ ಪ್ರಾಧಿಕಾರಗಳಿಂದ ವಿನ್ಯಾಸ ನಕ್ಷೆ ಅನುಮೋದನೆ ಪಡೆಯದೇ ಅನಧಿಕೃತವಾಗಿ ವಿಭಜಿಸಿ, ಸ್ಥಳೀಯ ಸಂಸ್ಥೆಯಲ್ಲಿ ಖಾತೆ ತೆರೆದಿರುವ ನಿವೇಶನಗಳಿಗೆ ಕಟ್ಟಡ ನಿರ್ಮಾಣ ಮಾಡುವ ಸಂಬಂಧ ತಾಂತ್ರಿಕ ಅಭಿಪ್ರಾಯವನ್ನು ನೀಡುವುದು ಸಮಂಜಸವಲ್ಲದ ಕಾರಣ ಇಂತಹ ನಿವೇಶನಗಳಲ್ಲಿ ಕಟ್ಟಡ ಪರವಾನಿಗೆ ನೀಡಲು ತಾಂತ್ರಿಕ ಅಭಿಪ್ರಾಯ ನೀಡಬಾರದೆಂದು ಸೂಚಿಸಲಾಗಿದೆ. ಹಾಗೂ ಈ ಪ್ರಕರಣಗಳನ್ನು ಅಕ್ರಮ-ಸಕ್ರಮ ಯೋಜನೆಯಲ್ಲಿ ಪರಿಶೀಲಿಸಬಹುದಾಗಿ ತಿಳಿಸಲಾಗಿದೆ.

ಸದರಿ ಸುತ್ತೋಲೆಯಲ್ಲಿನ ನಿರ್ದೇಶನಗಳನ್ನು ಪಾಲಿಸುವಲ್ಲಿನ ಸಮಸ್ಯೆಗಳನ್ನು ವಿವರಿಸಿ ಕೆಲವು ಪ್ರಾಧಿಕಾರಗಳು ಸ್ಪಷ್ಟೀಕರಣ, ಮಾರ್ಗದರ್ಶನವನ್ನು ನೀಡುವಂತೆ ಕೋರುತ್ತಿರುವ ಬಗ್ಗೆ ಉಲ್ಲೇಖ (2)ರ ಸಭೆಯಲ್ಲಿ ಕೂಲಂಕುಷವಾಗಿ ಚರ್ಚಿಸಿದ್ದು, ಸದರಿ ಸಭೆಯ ನಿರ್ಣಯದನ್ವಯ ಗ್ರಾಮಠಾಣಾ ವ್ಯಾಪ್ತಿಯಲ್ಲಿನ ನಿವೇಶನಗಳಿಗೆ ಹಾಗೂ ಕರ್ನಾಟಕ ಪೌರ ಕಾಯ್ದೆ, 1964ರ ಕಲಂ 387 ದಿನಾಂಕ:08-12-1976 ರಿಂದ ಜಾರಿಯಲ್ಲಿದ್ದು, ಸದರಿ ದಿನಾಂಕ: 08-12-1976ರ ಪೂರ್ವದಲ್ಲಿ ಭೂ ಪರಿವರ್ತನೆಯಾದ ಜಮೀನುಗಳಲ್ಲಿ ಸ್ಥಳೀಯ ಸಂಸ್ಥೆಯಲ್ಲಿ ಖಾತೆ ತೆರೆದಿರುವ ನಿವೇಶನಗಳಿಗೆ ಕಟ್ಟಡ ಪರವಾನಿಗೆ ನೀಡುವ ಸಂಬಂಧ ತಾಂತ್ರಿಕ ಅಭಿಪ್ರಾಯ ನೀಡಬಹುದಾಗಿದೆ.

ಹಾಗೂ ದಿನಾಂಕ:08-12-1976 ರ ಪೂರ್ವದಲ್ಲಿ ಭೂ ಪರಿವರ್ತನೆಯಾಗದ ನಿವೇಶನಗಳಿಗೆ ಸ್ಥಳೀಯ ಸಂಸ್ಥೆಯಲ್ಲಿ ಖಾತೆ ತೆರೆದಿದ್ದರೆ, ನಿಯಮಾನುಸಾರ ಭೂ ಪರಿವರ್ತನೆ ಆದೇಶವನ್ನು ಕಂದಾಯ ಇಲಾಖೆಯಿಂದ ಪಡೆದುಕೊಂಡ ನಂತರ ಅಂತಹ ನಿವೇಶನಗಳಿಗೆ ಕಟ್ಟಡ ಪರವಾನಿಗೆ ನೀಡಲು ತಾಂತ್ರಿಕ ಅಭಿಪ್ರಾಯ ನೀಡಬಹುದಾಗಿ ಸಹ ತಿಳಿಸಲಾಗಿದೆ.

ಸಹಿ:
ನಗರ ಮತ್ತು ಗ್ರಾಮಾಂತರ ಯೋಜನಾ ನಿರ್ದೇಶಕರು

2......

nk.pa:sec.285

ಪ್ರತಿಯನ್ನು:

1. ನಗರ ಮತ್ತು ಗ್ರಾಮಾಂತರ ಯೋಜನಾ ಹೆಚ್ಚುವರಿ ನಿರ್ದೇಶಕರು, ವಲಯ ಕಛೇರಿ, ಧಾರವಾಡ.
2. ನಗರ ಮತ್ತು ಗ್ರಾಮಾಂತರ ಯೋಜನಾ ಜಂಟಿ ನಿರ್ದೇಶಕರು, ವಿಭಾಗೀಯ ಕಛೇರಿ, ಗುಲ್ಬರ್ಗಾ/ ಮೈಸೂರು/ ಬೆಂಗಳೂರು.
3. ಆಯುಕ್ತರು, ಎಲ್ಲಾ ನಗರಾಭಿವೃದ್ಧಿ ಪ್ರಾಧಿಕಾರಗಳು.
4. ಸದಸ್ಯ-ಕಾರ್ಯದರ್ಶಿಗಳು/ ಮುಖ್ಯಾಧಿಕಾರಿಗಳು/ ಪೌರಾಯುಕ್ತರು, ಎಲ್ಲಾ ನಗರ ಯೋಜನಾ ಪ್ರಾಧಿಕಾರಗಳು/ ಎಲ್ಲಾ ಪುರಸಭೆ ಯೋಜನಾ ಪ್ರಾಧಿಕಾರಗಳು.
5. ನಗರ ಮತ್ತು ಗ್ರಾಮಾಂತರ ಯೋಜನಾ ಇಲಾಖೆಯ ಎಲ್ಲಾ ಶಾಖಾ ಕಛೇರಿಗಳಿಗೆ.
6. ಕೇಂದ್ರ ಕಛೇರಿಯ ಎಲ್ಲಾ ಪತ್ರಾಂಕಿತ ಅಧಿಕಾರಿಗಳಿಗೆ/ತಾಂತ್ರಿಕ ಸಿಬ್ಬಂದಿಗಳಿಗೆ.
7. ನಗರ ಮತ್ತು ಗ್ರಾಮಾಂತರ ಯೋಜನಾ ನಿರ್ದೇಶಕರ ಆಪ್ತ ಶಾಖೆಗೆ.
8. ಶಾಖಾ ರಕ್ಷಾ ಕಡತ/ಹೆಚ್ಚುವರಿ ಪ್ರತಿಗಳು.

ನಗರ ಮತ್ತು ಗ್ರಾಮಾಂತರ ಯೋಜನಾ ನಿರ್ದೇಶಕರು

nk.pa.sec.286



ಕರ್ನಾಟಕ ಸರ್ಕಾರ

03 Starred 13/2/19

ಸಂಖ್ಯೆ: ನಅಇ 4 ಬಿಎಂಎಸ್/ಎ 2019

ಕರ್ನಾಟಕ ಸರ್ಕಾರದ ಸಚಿವಾಲಯ,
ವಿಕಾಸಸೌಧ,
ಬೆಂಗಳೂರು, ದಿನಾಂಕ: 12-02-2019.

**ಇವರಿಂದ,**

ಸರ್ಕಾರದ ಅಪರ ಮುಖ್ಯ ಕಾರ್ಯದರ್ಶಿ,
ನಗರಾಭಿವೃದ್ಧಿ ಇಲಾಖೆ,
ವಿಕಾಸಸೌಧ, ಬೆಂಗಳೂರು.

**ಇವರಿಗೆ,**

ಕಾರ್ಯದರ್ಶಿ,
ಕರ್ನಾಟಕ ವಿಧಾನ ಸಭೆ/ ~~ವಿಧಾನ ಪರಿಷತ್ತು~~,
ವಿಧಾನಸೌಧ, ಬೆಂಗಳೂರು.

**ಮಾನ್ಯರೇ,**

**ವಿಷಯ:** ಕರ್ನಾಟಕ ವಿಧಾನ ಸಭೆ/~~ವಿಧಾನ ಪರಿಷತ್ತಿನ~~ ಮಾನ್ಯ ಸದಸ್ಯರಾದ ಶ್ರೀ A.T. ರಾಮಸ್ವಾಮಿ ರವರು ಮಂಡಿಸಿರುವ ಚುಕ್ಕೆ ಗುರುತಿನ/~~ಗುರುತಿಲ್ಲದ~~ ಪ್ರಶ್ನೆ ಸಂಖ್ಯೆ: 257 ಕ್ಕೆ ಉತ್ತರವನ್ನು ಕಳುಹಿಸಿಕೊಡುವ ಬಗ್ಗೆ.

* * * * *

ಮೇಲ್ಕಂಡ ವಿಷಯಕ್ಕೆ ಸಂಬಂಧಿಸಿದಂತೆ, ಕರ್ನಾಟಕ ವಿಧಾನ ಸಭೆ/~~ವಿಧಾನ ಪರಿಷತ್ತಿನ~~ ಮಾನ್ಯ ಸದಸ್ಯರಾದ ಶ್ರೀ A.T. ರಾಮಸ್ವಾಮಿ ರವರು ಮಂಡಿಸಿರುವ ಚುಕ್ಕೆ ಗುರುತಿನ/~~ಗುರುತಿಲ್ಲದ~~ ಪ್ರಶ್ನೆ ಸಂಖ್ಯೆ: 257 ಕ್ಕೆ ಉತ್ತರದ 350 ಪ್ರತಿಗಳನ್ನು ಇದರೊಂದಿಗೆ ಲಗತ್ತಿಸಿ ತಮಗೆ ಕಳುಹಿಸಲು ನಿರ್ದೇಶಿತನಾಗಿದ್ದೇನೆ.

ತಮ್ಮ ನಂಬುಗೆಯ,

(ಅರ್ಜುನಮೂರ್ತಿ)
ಸರ್ಕಾರದ ಅಧೀನ ಕಾರ್ಯದರ್ಶಿ (ಪ್ರ),
ನಗರಾಭಿವೃದ್ಧಿ ಇಲಾಖೆ (ಬಿ.ಬಿ.ಎಂ.ಪಿ.)

ಕರ್ನಾಟಕ ವಿಧಾನ ಸಭೆ

| | | | |
|---|---|---|---|
| 1 | ಚುಕ್ಕೆ ಗುರುತಿನ ಪ್ರಶ್ನೆ ಸಂಖ್ಯೆ | : | 257 |
| 2 | ಸದಸ್ಯರ ಹೆಸರು | : | ಶ್ರೀ ಎ.ಟಿ. ರಾಮಸ್ವಾಮಿ |
| 3 | ಉತ್ತರಿಸುವ ದಿನಾಂಕ | : | 13-02-2019 |
| 4 | ಉತ್ತರಿಸುವವರು | : | ಉಪ ಮುಖ್ಯಮಂತ್ರಿಗಳು |

| ಕ್ರ.ಸಂ | ಪ್ರಶ್ನೆ | ಉತ್ತರ |
|---|---|---|
| ಅ | ಬೆಂಗಳೂರು ಪೂರ್ವ ತಾಲ್ಲೂಕಿನ ಕೆ.ಆರ್.ಪುರ ಹೋಬಳಿಯ ಕಗ್ಗದಾಸಪುರ ಕೆರೆಗೆ ಬೆಂಗಳೂರು ನೀರು ಸರಬರಾಜು ಮತ್ತು ಒಳಚರಂಡಿ ಮಂಡಳಿಯವರು ಕೊಳಚೆ ನೀರನ್ನು ಬಿಡುತ್ತಿರುವುದು ಸರ್ಕಾರದ ಗಮನಕ್ಕೆ ಬಂದಿದೆಯೇ; | ಬಂದಿದೆ. |
| ಆ | ಬಂದಿದ್ದಲ್ಲಿ, ಕೆರೆಯ ನೀರು ಸಂಪೂರ್ಣವಾಗಿ ಕಲುಷಿತಗೊಂಡು ರೋಗರುಜಿನಗಳು ಹರಡುತ್ತಿರುವುದು ಸರ್ಕಾರದ ಗಮನಕ್ಕೆ ಬಂದಿದೆಯೇ; | ಕೆರೆಯ ನೀರು ಕಲುಷಿತಗೊಂಡು ರೋಗರುಜಿನಗಳು ಹರಡದಂತೆ ತಡೆಯಲು ಬಿ.ಬಿ.ಎಂ.ಪಿ.ಯ ವತಿಯಿಂದ ಕೆರೆಯನ್ನು ಅಭಿವೃದ್ಧಿಪಡಿಸಲು ಸಮಗ್ರ ಯೋಜನಾ ವರದಿಯನ್ನು ತಯಾರಿಸಲಾಗಿರುತ್ತದೆ. |
| ಇ | ಹಾಗಿದ್ದಲ್ಲಿ, ಈ ಬಗ್ಗೆ ಸರ್ಕಾರ ಕೈಗೊಂಡಿರುವ ಕ್ರಮಗಳೇನು? (ವಿವರ ನೀಡುವುದು) | **ಬೆಂಗಳೂರು ನೀರು ಸರಬರಾಜು ಮತ್ತು ಒಳಚರಂಡಿ ಮಂಡಳಿಯ ವತಿಯಿಂದ:**<br><br>ಕಗ್ಗದಾಸಪುರ ಕೆರೆಗೆ ಹರಿದು ಬರುತ್ತಿರುವ ತ್ಯಾಜ್ಯ ನೀರನ್ನು ತಡೆಗಟ್ಟಲು ಈ ಕೆರೆಯ ಪಕ್ಕದಲ್ಲಿ 5 ದಶಲಕ್ಷ ಲೀಟರ್ ಸಾಮರ್ಥ್ಯದ ತ್ಯಾಜ್ಯ ನೀರು ಶುದ್ಧೀಕರಣ ಘಟಕವನ್ನು ನಿರ್ಮಿಸಲು ಸರ್ಕಾರವು ಜಲಮಂಡಳಿಗೆ ನಿರ್ದೇಶಿಸಿರುತ್ತದೆ. ಈ ಘಟಕಕ್ಕೆ ಬೇಕಾದ ಸುಮಾರು 2 ಎಕರೆ ಜಾಗವನ್ನು ಬೃಹತ್ ಬೆಂಗಳೂರು ಮಹಾನಗರ ಪಾಲಿಕೆಯು ಈಗಾಗಲೇ ಜಲಮಂಡಳಿಗೆ ನೀಡಿದೆ. ಜಲಮಂಡಳಿ ವತಿಯಿಂದ ಘಟಕದ ಕಾಮಗಾರಿಗೆ ವಿಸ್ತೃತ ಯೋಜನಾ ವರದಿ ತಯಾರಿಸಲು ಸಮಾಲೋಚಕರನ್ನು ನೇಮಿಸಲಾಗಿದೆ. ಘಟಕದ ಸ್ಥಾಪನೆಗೆ ಮೊತ್ತ ರೂ.16.58 ಕೋಟಿಗಳಾಗುತ್ತದೆ. ಕಾಮಗಾರಿಗೆ ವಿಸ್ತೃತ ಯೋಜನಾ ವರದಿ ತಯಾರಿಸಿ, ಟೆಂಡರ್ ಪ್ರಕ್ರಿಯೆ ಮಾಡಿ ಘಟಕವನ್ನು ನಿರ್ಮಿಸಿ 2020ರ ಅಂತ್ಯದಲ್ಲಿ ಕಾರ್ಯಚಾಲನೆಯನ್ನು ಮಾಡಲು ಯೋಜಿಸಲಾಗಿದೆ.<br><br>ಬೃಹತ್ ಬೆಂಗಳೂರು ಮಹಾನಗರ ಪಾಲಿಕೆಗೆ ರಾಜ್ಯ ಸರ್ಕಾರವು 2018-19ನೇ ಸಾಲಿನಲ್ಲಿನ "ಮುಖ್ಯಮಂತ್ರಿಗಳ ನವ ಬೆಂಗಳೂರು ಯೋಜನೆ" ಅಡಿಯಲ್ಲಿ 59 ಕೆರೆಗಳ |

| | | |
|---|---|---|
| | | ಅಭಿವೃದ್ಧಿ ಕಾಮಗಾರಿಗಳಿಗೆ 2018-19, 2019-20 ಮತ್ತು 2020-2021ನೇ ಸಾಲುಗಳ ಕ್ರಿಯಾ ಯೋಜನೆಯಲ್ಲಿ ರೂ.348.00 ಕೋಟಿಗಳ ಅನುದಾನವನ್ನು ನಿಗಧಿಪಡಿಸಿದೆ. ಈ ಪೈಕಿ ಸದರಿ ಕೆರೆ ಅಭಿವೃದ್ಧಿ ಕಾಮಗಾರಿಗಾಗಿ ರೂ.8.5 ಕೋಟಿಗಳ ಅನುದಾನವನ್ನು ನಿಗಧಿಪಡಿಸಲಾಗಿರುತ್ತದೆ. |

ಸಂಖ್ಯೆ: ನಅಇ 42 ಎಂಎನ್‌ಯು 2019

(ಜಿ. ಪರಮೇಶ್ವರ)
ಉಪ ಮುಖ್ಯಮಂತ್ರಿಗಳು



**ಕರ್ನಾಟಕ ಸರ್ಕಾರ**

ಸಂಖ್ಯೆ: ನಅಇ 07 ಎಲ್ಎಕ್ಯೂ 2019

ಕರ್ನಾಟಕ ಸರ್ಕಾರದ ಸಚಿವಾಲಯ,
ವಿಕಾಸ ಸೌಧ.
ಬೆಂಗಳೂರು, ದಿನಾಂಕ: 12-02-2019

ಇಂದ
ಸರ್ಕಾರದ ಕಾರ್ಯದರ್ಶಿಗಳು,
ನಗರಾಭಿವೃದ್ಧಿ ಇಲಾಖೆ.
ವಿಕಾಸ ಸೌಧ,
ಬೆಂಗಳೂರು.

ಇವರಿಗೆ:
ಕಾರ್ಯದರ್ಶಿಗಳು,
ಕರ್ನಾಟಕ ವಿಧಾನ ಸಭೆ,
ವಿಧಾನ ಸೌಧ.
ಬೆಂಗಳೂರು.

ಮಾನ್ಯರೆ.

ವಿಷಯ:- ಕರ್ನಾಟಕ ವಿಧಾನ ಸಭೆಯ ಸದಸ್ಯರಾದ ಡಾ:ಕೆ.ಶ್ರೀನಿವಾಸಮೂರ್ತಿ(ನೆಲಮಂಗಲ) ಇವರು ಮಂಡಿಸಿರುವ ಚುಕ್ಕೆ ಗುರುತಿನ ಪ್ರಶ್ನೆ ಸಂಖ್ಯೆ:876 ಕ್ಕೆ ಉತ್ತರ ನೀಡುವ ಬಗ್ಗೆ.

.----

ಮೇಲ್ಕಂಡ ವಿಷಯಕ್ಕೆ ಸಂಬಂಧಿಸಿದಂತೆ, ಕರ್ನಾಟಕ ವಿಧಾನ ಸಭೆ ಸದಸ್ಯರಾದ ಡಾ:ಕೆ.ಶ್ರೀನಿವಾಸಮೂರ್ತಿ(ನೆಲಮಂಗಲ) ಇವರು ಮಂಡಿಸಿರುವ ಚುಕ್ಕೆ ಗುರುತಿನ ಪ್ರಶ್ನೆ ಸಂಖ್ಯೆ: 876 ಕ್ಕೆ ಉತ್ತರವನ್ನು ತಯಾರಿಸಿದ್ದು, ಇದರ 350 ಪ್ರತಿಗಳನ್ನು ಇದರೊಂದಿಗೆ ಕಳುಹಿಸಲು ನಿರ್ದೇಶಿತನಾಗಿದ್ದೇನೆ.

ತಮ್ಮ ನಂಬುಗೆಯ.

12/2/19

(ಪಂಪನಗೌಡ ಮೇಲ್ಸೀಮೆ)
ಸರ್ಕಾರದ ಅಧೀನ ಕಾರ್ಯದರ್ಶಿ.
ನಗರಾಭಿವೃದ್ಧಿ ಇಲಾಖೆ.



# ಕರ್ನಾಟಕ ವಿಧಾನ ಸಭೆ

ಚುಕ್ಕೆ ಗುರುತಿನ ಪ್ರಶ್ನೆ ಸಂಖ್ಯೆ : 876
ಸದಸ್ಯರ ಹೆಸರು : ಡಾ॥ ಕೆ. ಶ್ರೀನಿವಾಸಮೂರ್ತಿ (ನೆಲಮಂಗಲ)
ಉತ್ತರಿಸುವ ದಿನಾಂಕ : 13.02.2019.
ಉತ್ತರಿಸುವ ಸಚಿವರು : ಮಾನ್ಯ ಪೌರಾಡಳಿತ ಹಾಗೂ ಸ್ಥಳೀಯ ಸಂಸ್ಥೆಗಳ ಸಚಿವರು

| ಕ್ರ.ಸಂ | ಪ್ರಶ್ನೆ | ಉತ್ತರ |
|---|---|---|
| (ಅ) | ನೆಲಮಂಗಲ ವಿಧಾನಸಭಾ ಕ್ಷೇತ್ರದ ನೆಲಮಂಗಲ ಪುರಸಭೆಯನ್ನು ನಗರಸಭೆಯನ್ನಾಗಿ ಮೇಲ್ದರ್ಜೆಗೇರಿಸಲು ಪ್ರಸ್ತಾವನೆ ಸಲ್ಲಿಸಿರುವುದು ಸರ್ಕಾರದ ಗಮನಕ್ಕೆ ಬಂದಿದೆಯೇ(ವಿವರ ನೀಡುವುದು); | ಹೌದು.<br>ಬೆಂಗಳೂರು ಗ್ರಾಮಾಂತರ ಜಿಲ್ಲೆಯ ನೆಲಮಂಗಲ ಪುರಸಭೆ ಹಾಗೂ ಈ ಪುರಸಭೆಗೆ ಹೊಂದಿಕೊಂಡಿರುವ ಅರಿಶಿನಕುಂಟೆ, ಬಸವನಹಳ್ಳಿ, ವಾಜ್ರರಹಳ್ಳಿ, ವಿಶ್ವೇಶ್ವರಪುರ, ಮಲ್ಲಾಪುರ, ಕೆಂಪಲಿಂಗನಹಳ್ಳಿ, ಬ್ಯಾಡರಹಳ್ಳಿ, ಕೂಲಿಪುರ ಗ್ರಾಮಗಳು ಸೇರಿಕೊಂಡಂತೆ 'ನಗರಸಭೆ'ಯನ್ನಾಗಿ ಮೇಲ್ದರ್ಜೆಗೇರಿಸಲು ಪ್ರಸ್ತಾವನೆಯು ಪರಿಶೀಲನೆಯಲ್ಲಿರುತ್ತದೆ. |
| (ಆ) | ಹಾಗಿದ್ದಲ್ಲಿ ಯಾವ ದಿನಾಂಕದಂದು ಸರ್ಕಾರಕ್ಕೆ ಪ್ರಸ್ತಾವನೆ ಸಲ್ಲಿಸಲಾಗಿದೆ; | ದಿನಾಂಕ:10.08.2018 ರಂದು ಸರ್ಕಾರದಲ್ಲಿ ಪ್ರಸ್ತಾವನೆ ಸ್ವೀಕೃತವಾಗಿರುತ್ತದೆ. |
| (ಇ) | ಈ ಬಗ್ಗೆ ಸರ್ಕಾರ ಕೈಗೊಂಡ ಕ್ರಮಗಳೇನು(ವಿವರ ನೀಡುವುದು); | ಬೆಂಗಳೂರು ಗ್ರಾಮಾಂತರ ಜಿಲ್ಲೆಯ ನೆಲಮಂಗಲ ಪುರಸಭೆ ಹಾಗೂ ಈ ಪುರಸಭೆಗೆ ಹೊಂದಿಕೊಂಡಿರುವ ಅರಿಶಿನಕುಂಟೆ, ಬಸವನಹಳ್ಳಿ, ವಾಜರಹಳ್ಳಿ, ವಿಶ್ವೇಶ್ವರಪುರ, ಮಲ್ಲಾಪುರ, ಬ್ಯಾಡರಹಳ್ಳಿ ಕೆಂಪಲಿಂಗನಹಳ್ಳಿ, ಕೂಲಿಪುರ ಗ್ರಾಮಗಳು ಸೇರಿಕೊಂಡಂತೆ 'ನಗರಸಭೆ'ಯನ್ನಾಗಿ ಮೇಲ್ದರ್ಜೆಗೇರಿಸಲು ಆರ್ಥಿಕ ಇಲಾಖೆ ಹಾಗೂ ಗ್ರಾಮೀಣಾಭಿವೃದ್ಧಿ ಮತ್ತು ಪಂಚಾಯತ್ ರಾಜ್ ಇಲಾಖೆಯ ಸಹಮತಿ ಪಡೆಯಲಾಗಿದ್ದು, ಕರ್ನಾಟಕ ಪೌರಸಭೆಗಳ ಕಾಯ್ದೆ 1964ರ ಕಲಂ 3, 9 ಹಾಗೂ 361ರನ್ವಯ ಸರ್ಕಾರದ ಹಂತದಲ್ಲಿ ಪರಿಶೀಲನೆಯಲ್ಲಿದ್ದು, ಈ ಬಗ್ಗೆ ನಿಯಮಾನುಸಾರ ಅಗತ್ಯ ಕ್ರಮ ಜರುಗಿಸಲಾಗುವುದು. |
| (ಈ) | ಯಾವ ಕಾಲಮಿತಿಯೊಳಗೆ ಅನುಮೋದನೆ ನೀಡಲಾಗುವುದು(ವಿವರ ನೀಡುವುದು); | |

ಸಂಖ್ಯೆ: ನಅಇ 07 ಎಲ್ಎಕ್ಯೂ 2019

(ಚನ್ನಬಸಪ್ಪ ಎಸ್ ಶಿವಳ್ಳಿ)
ಪೌರಾಡಳಿತ ಹಾಗೂ
ಸ್ಥಳೀಯ ಸಂಸ್ಥೆಗಳ ಸಚಿವರು



**ಕರ್ನಾಟಕ ಸರ್ಕಾರ**

ಸಂಖ್ಯೆ: ನಅಇ 34 ಬೆಮಪ್ರಾ 2019

ಕರ್ನಾಟಕ ಸರ್ಕಾರದ ಸಚಿವಾಲಯ
ವಿಕಾಸ ಸೌಧ,
ಬೆಂಗಳೂರು, ದಿನಾಂಕ: 12.02.2019

05 Stard 13/2/19

**ಇವರಿಂದ:**
ಸರ್ಕಾರದ ಪ್ರಧಾನ ಕಾರ್ಯದರ್ಶಿ,
ನಗರಾಭಿವೃದ್ಧಿಇಲಾಖೆ.

**ಇವರಿಗೆ:**
ಕಾರ್ಯದರ್ಶಿಗಳು
ಕರ್ನಾಟಕ ವಿಧಾನಸಭೆ,
ವಿಧಾನಸೌಧ.

ಮಾನ್ಯರೆ,

**ವಿಷಯ:** ಮಾನ್ಯ ವಿಧಾನ ಸಭಾ ಸದಸ್ಯರಾದ ಶ್ರೀ ಅಭಯ್ ಪಾಟೀಲ್ (ಬೆಳಗಾಂ ದಕ್ಷಿಣ) ಇವರ ಚುಕ್ಕೆ ಗುರುತಿನ ಪ್ರಶ್ನೆ ಸಂಖ್ಯೆ: 858ಕ್ಕೆ ಉತ್ತರ ನೀಡುವ ಬಗ್ಗೆ.

*****

ಮೇಲ್ಕಂಡ ವಿಷಯಕ್ಕೆ ಸಂಬಂಧಿಸಿದಂತೆ, ಮಾನ್ಯ ವಿಧಾನ ಸಭಾ ಸದಸ್ಯರಾದ ಶ್ರೀ ಅಭಯ್ ಪಾಟೀಲ್ (ಬೆಳಗಾಂ ದಕ್ಷಿಣ) ಇವರ ಚುಕ್ಕೆ ಗುರುತಿನ ಪ್ರಶ್ನೆ ಸಂಖ್ಯೆ: 858ಕ್ಕೆ ನೀಡಬೇಕಾಗಿರುವ ಉತ್ತರದ 350 ಪ್ರತಿಗಳನ್ನು ಇದರೊಂದಿಗೆ ಲಗತ್ತಿಸಿ ಮುಂದಿನ ಸೂಕ್ತ ಕ್ರಮಕ್ಕಾಗಿ ಕಳುಹಿಸಿಕೊಡಲು ನಿರ್ದೇಶಿಸಲ್ಪಟ್ಟಿದ್ದೇನೆ.

ತಮ್ಮ ನಂಬುಗೆಯ,

**(ನಾಗರಾಜ)**
ಸರ್ಕಾರದ ಅಧೀನ ಕಾರ್ಯದರ್ಶಿ,
ನಗರಾಭಿವೃದ್ಧಿಇಲಾಖೆ.



# ಕರ್ನಾಟಕ ವಿಧಾನಸಭೆ

| | | |
|---|---|---|
| ಚುಕ್ಕೆ ಗುರುತಿನ ಪ್ರಶ್ನೆ ಸಂಖ್ಯೆ | : | 858 |
| ಸದಸ್ಯರ ಹೆಸರು | : | ಶ್ರೀ ಅಭಯ್ ಪಾಟೀಲ್ (ಬೆಳಗಾಂ ದಕ್ಷಿಣ) |
| ಉತ್ತರಿಸುವ ದಿನಾಂಕ | : | 13/02/2019 |
| ಉತ್ತರಿಸಬೇಕಾದವರು | : | ಮಾನ್ಯ ನಗರಾಭಿವೃದ್ಧಿ ಸಚಿವರು. |

| ಕ್ರ ಸಂ. | ಪ್ರಶ್ನೆ | ಉತ್ತರ |
|---|---|---|
| ಅ) | ಬೆಳಗಾವಿಯ ಗ್ರಾಮದ ಸರ್ವೆ ನಂ.1286ರಲ್ಲಿ ವಸತಿ ಉದ್ದೇಶದ ವಿನ್ಯಾಸದಲ್ಲಿ ಸಿ.ಡಿ.ಪಿ. ಪ್ರಕಾರ ಮಹಾ ಯೋಜನೆಯಲ್ಲಿರುವ ರಸ್ತೆಯನ್ನು ಸರ್ಕಾರದ ಪೂರ್ವಾನುಮತಿಯನ್ನು ಪಡೆಯದೇ ಬದಲಾಯಿಸಿದ ತಪ್ಪಿತಸ್ಥ ಅಧಿಕಾರಿಗಳ ವಿರುದ್ಧ ಕ್ರಮವನ್ನು ಕೈಗೊಳ್ಳಲಾಗಿದೆಯೇ; | ದಿನಾಂಕ 04.10.2012 ರಂದು ಬೆಳಗಾವಿ ನಗರಾಭಿವೃದ್ಧಿ ಪ್ರಾಧಿಕಾರದಿಂದ ಅನುಮೋದನೆಗೊಂಡಿರುವ ಬೆಳಗಾವಿ ರಿ.ಸ.ನಂ 1285/1ಅ, 1ಬ, 1ಕ, 1ಡ, 2ಅ, 2ಬ, 2ಕ, 2ಡ ರ ವಸತಿ ವಿನ್ಯಾಸದ ದಕ್ಷಿಣ ಗಡಿಗೆ ಹೊಂದಿಕೊಂಡು 12.0 ಮೀ ರಸ್ತೆಯನ್ನು ರಿ.ಸ.ನಂ. 1286ರ ಕೃಷಿ ಜಮೀನಿನಲ್ಲಿ ನಮೂದಿಸಲಾಗಿದ್ದು, ಸದರಿ 12.0 ಮೀ ರಸ್ತೆಯನ್ನು 1993 ರಲ್ಲಿ ಅನುಮೋದನೆಗೊಂಡಿರುವ ಸಿ.ಡಿ.ಪಿ ರಲ್ಲಿ ಪ್ರಸ್ತಾಪಿಸಿರುವುದಿಲ್ಲ. ಸರ್ಕಾರದಿಂದ ಅನುಮೋದನೆಗೊಂಡಿರುವ ಮಹಾಯೋಜನೆ ಪರಿಷ್ಕೃತ–2(ಅಂತಿಮ) ರಲ್ಲಿ ಸದರಿ ಅನುಮೋದಿತ ವಿನ್ಯಾಸ ನಕ್ಷೆಯನ್ನು ಅಳವಡಿಸಲಾಗಿತ್ತು. ತದನಂತರ ಅರ್ಜಿದಾರರ |
| ಆ) | ಕೈಗೊಂಡಿದ್ದಲ್ಲಿ, ತಪ್ಪಿತಸ್ಥ ಅಧಿಕಾರಿ/ಸಿಬ್ಬಂದಿಗಳು ಯಾರ್‍ಯಾರು ಅವರುಗಳ ವಿರುದ್ಧ ಯಾವ ಕ್ರಮ ಕೈಗೊಳ್ಳಲಾಗಿದೆ; ಇಲ್ಲವಾದಲ್ಲಿ, ಈವರೆಗಿನ ವಿಳಂಬಕ್ಕೆ ಕಾರಣಗಳೇನು; | ಮನವಿ ಮೇರೆಗೆ ಪ್ರಾಧಿಕಾರದ ಸಭೆ ದಿನಾಂಕ: 14.03.2016 ರ ತೀರ್ಮಾನದನ್ವಯ ರಿ.ಸ.ನಂ 1285/1ಅ, 1ಬ, 1ಕ, 1ಡ, 2ಅ, 2ಬ, 2ಕ, 2ಡ ರ ಜಮೀನಿಗೆ ದಿನಾಂಕ: 20.03.2017 ರಂದು ಅನುಮೋದಿಸಿರುವ ಮಾರ್ಪಾಡಿತ ವಸತಿ ವಿನ್ಯಾಸದ ದಕ್ಷಿಣ ಗಡಿಗೆ ಹೊಂದಿಕೊಂಡು 12.0ಮೀ ರಸ್ತೆಯನ್ನು ರಿ.ಸ.ನಂ. 1286 ರಲ್ಲಿ ನಮೂದಿಸಿರುವುದಿಲ್ಲ.<br><br>ಮಹಾಯೋಜನೆ ಪರಿಷ್ಕೃತ–2 (ಅಂತಿಮ) ರಲ್ಲಿ ನಮೂದಿಸಿರುವ 12.0 ಮೀ ರಸ್ತೆಯು ವಿನ್ಯಾಸದಲ್ಲಿ ಅಳವಡಿಸಿರುವ ರಸ್ತೆ ಮಾತ್ರ ಆಗಿದ್ದು, ಮಹಾಯೋಜನೆ ಪರಿಷ್ಕೃತ–2(ಅಂತಿಮ)ರಲ್ಲಿಯ ಪ್ರಸ್ತಾವಿತ 12.0 ಮೀ ರಸ್ತೆ ಆಗಿರುವುದಿಲ್ಲ. ಸರ್ಕಾರದ ಆದೇಶ ಸಂಖ್ಯೆ ನಅಇ 83 ಬೆಮಪ್ರಾ 2013, ದಿನಾಂಕ: 15.02.2014 ರ ಕಂಡಿಕೆ (3) ರಲ್ಲಿ "ಮಹಾಯೋಜನೆಯಲ್ಲಿ ಗುರುತಿಸಲಾಗಿರುವ ಸರ್ವೆ ನಂಬರ್‌ಗಳು, ನಾಲೆ, ಅತೀ ಹೆಚ್ಚು ವಿದ್ಯುತ್ ವಾಹಕ ತಂತಿಗಳು, ಹಾಲಿ ರಸ್ತೆ, ಕೆರೆ, ಕೊಳ್ಳಗಳಲ್ಲಿ ಯಾವುದಾರು ತಪ್ಪಿದಲ್ಲಿ ಅಂತಹ ತಪ್ಪುಗಳನ್ನು ಸೂಕ್ತ ದಾಖಲೆಗಳೊಂದಿಗೆ ಸ್ಥಳ ಪರಿಶೀಲಿಸಿ, ದೃಢೀಕರಿಸಿಕೊಂಡು ವಾಸ್ತವಾಂಶಗಳನ್ನು ಗಣನೆಗೆ ತೆಗೆದುಕೊಂಡು ಪ್ರಾಧಿಕಾರವು ಸರಿಪಡಿಸಿಕೊಳ್ಳತಕ್ಕದ್ದು" ಎಂಬ ಅವಕಾಶವನ್ನು ಕಲ್ಪಿಸಲಾಗಿದೆ, ಸದರಿ ಅವಕಾಶವನ್ನು ಪರಿಗಣಿಸಿ ರಿ.ಸ.ನಂ 1285/1ಅ, 1ಬ, 1ಕ, 1ಡ, 2ಅ, 2ಬ, 2ಕ, 2ಡ ರ ಜಮೀನಿಗೆ ಅನುಮೋದಿಸಿರುವ ಮಾರ್ಪಾಡಿತ |

| | | |
|---|---|---|
| | | ವಸತಿ ವಿನ್ಯಾಸದಲ್ಲಿ ಸದರಿ 12.0 ಮೀ ರಸ್ತೆ ಕೈಬಿಟ್ಟಿರುವುದರಿಂದ, ರಿ.ಸ.ನಂ. 1286/2+3+4+5+6+7+8+9 ರ ಜಮೀನಿಗೆ ಅನುಮೋದಿಸಿರುವ ಕರಡು ವಿನ್ಯಾಸದಲ್ಲಿ ಸದರಿ 12.0 ಮೀ ರಸ್ತೆಯನ್ನು ಅಳವಡಿಸಿರುವುದಿಲ್ಲ ಎಂದು ಆಯುಕ್ತರು, ಬೆಳಗಾವಿ ನಗರಾಭಿವೃದ್ಧಿ ಪ್ರಾಧಿಕಾರ ರವರು ತಿಳಿಸಿರುತ್ತಾರೆ.<br><br>ಆದ್ದರಿಂದ, ಪ್ರಾಧಿಕಾರವು ತಿಳಿಸಿರುವಂತೆ ಸರ್ಕಾರದ ಆದೇಶ ಸಂಖ್ಯೆ: ನಅಇ 83 ಬೆಮಪ್ರಾ 2013, ದಿನಾಂಕ 15.02.2014 ರ ಕಂಡಿಕೆ-3ರ ಅಂಶವು ಪ್ರಸ್ತುತ ಪ್ರಕರಣಕ್ಕೆ ಅನ್ವಯವಾಗುವುದೇ ಎಂಬ ಬಗ್ಗೆ ಕೂಲಂಕಷವಾಗಿ ಪರಿಶೀಲಿಸಿ ಹಾಗೂ ಅಗತ್ಯವೆನಿಸಿದಲ್ಲಿ ಸ್ಥಳ ತನಿಖೆ ಕೈಗೊಂಡು ಒಂದು ವಾರದೊಳಗಾಗಿ ವರದಿಯನ್ನು ಸಲ್ಲಿಸುವಂತೆ ನಗರ ಮತ್ತು ಗ್ರಾಮಾಂತರ ಯೋಜನಾ ನಿರ್ದೇಶಕರನ್ನು ಕೋರಲಾಗಿದೆ.<br><br>ನಗರ ಮತ್ತು ಗ್ರಾಮಾಂತರ ಯೋಜನಾ ನಿರ್ದೇಶಕರಿಂದ ವರದಿ ಪಡೆದ ನಂತರ ಪರಿಶೀಲಿಸಿ, ನಿಯಮಾನುಸಾರ ಮುಂದಿನ ಕ್ರಮವಹಿಸಲಾಗುವುದು. |
| ಇ) | ಸದರಿ ಸರ್ವೆ ನಂಬರಿನಲ್ಲಿ ಕೃಷಿಯಿಂದ ವಸತಿಗಾಗಿ ಭೂ ಪರಿವರ್ತನಾ ಆದೇಶದಲ್ಲಿರುವ ಷರತ್ತುಗಳು ಉಲ್ಲಂಘನೆಯಾಗಿದ್ದು, ಭೂ ಪರಿವರ್ತನಾ ಆದೇಶವನ್ನು ರದ್ದುಪಡಿಸಲು ಜಿಲ್ಲಾಧಿಕಾರಿಗಳಿಗೆ ಪ್ರಸ್ತಾವನೆಯನ್ನು ಸಲ್ಲಿಸಲಾಗಿದೆಯೇ; | ಈ ವಿಷಯವನ್ನು ಮುಂಬರುವ ಪ್ರಾಧಿಕಾರದ ಸಭೆಯಲ್ಲಿ ಮಂಡಿಸಿ, ಸಭೆಯ ನಿರ್ಣಯದೊಂದಿಗೆ ನಿಯಮಾನುಸಾರ ಸೂಕ್ತ ಕ್ರಮ ಕೈಗೊಳ್ಳಲಾಗುವುದೆಂದು ಬೆಳಗಾವಿ ನಗರಾಭಿವೃದ್ಧಿ ಪ್ರಾಧಿಕಾರದ ಆಯುಕ್ತರು ತಿಳಿಸಿರುತ್ತಾರೆ. |
| ಈ) | ಇಲ್ಲವಾದಲ್ಲಿ, ಇನ್ನೂ ಎಷ್ಟು ಅವಧಿ ಪ್ರಾಧಿಕಾರಕ್ಕೆ ಅವಶ್ಯಕತೆ ಇದೆ; ಯಾವಾಗ ಸಲ್ಲಿಸಲಾಗುವುದು (ವಿವರ ನೀಡುವುದು)? | |

**ಸಂಖ್ಯೆ: ನಅಇ 34 ಬೆಮಪ್ರಾ 2019**

(ಯು.ಟಿ. ಖಾದರ್)
ನಗರಾಭಿವೃದ್ಧಿ ಸಚಿವರು

**ಕರ್ನಾಟಕ ಸರ್ಕಾರ**

ಸಂಖ್ಯೆ: ಆನಾಸ 30 ಡಿಆರ್‌ಎ 2019

ಕರ್ನಾಟಕ ಸರ್ಕಾರದ ಸಚಿವಾಲಯ,
ವಿಕಾಸಸೌಧ, ನೆಲಮಹಡಿ,
ಬೆಂಗಳೂರು, ದಿನಾಂಕ: 12.02.2019

ಇವರಿಂದ,

ಸರ್ಕಾರದ ಕಾರ್ಯದರ್ಶಿ,
ಆಹಾರ, ನಾಗರಿಕ ಸರಬರಾಜು ಗ್ರಾಹಕರ ವ್ಯವಹಾರಗಳ
ಮತ್ತು ಕಾನೂನು ಮಾಪನಶಾಸ್ತ್ರ ಇಲಾಖೆ,

6
Stard
13/02/19

ಇವರಿಗೆ,

ಕಾರ್ಯದರ್ಶಿಗಳು,
ಕರ್ನಾಟಕ ವಿಧಾನ ಸಭೆ.
ವಿಧಾನಸೌಧ.

ಮಾನ್ಯರೆ,

ವಿಷಯ: ಮಾನ್ಯ ವಿಧಾನಸಭಾ ಸದಸ್ಯರಾದ ಶ್ರೀ ಅಪ್ಪಚ್ಚು ಇವರ ಚುಕ್ಕೆ ಗುರುತ್ತಿನ ಪ್ರಶ್ನೆ ಸಂಖ್ಯೆ:118ಕ್ಕೆ ಉತ್ತರ ನೀಡುವ ಬಗ್ಗೆ.

-----

ಮಾನ್ಯ ವಿಧಾನಸಭಾ ಸದಸ್ಯರಾದ ಶ್ರೀ ಅಪ್ಪಚ್ಚು ಇವರ ಚುಕ್ಕೆ ಗುರುತ್ತಿನ ಪ್ರಶ್ನೆ ಸಂಖ್ಯೆ: 118ಕ್ಕೆ ಉತ್ತರವನ್ನು ಸಿದ್ದಪಡಿಸಿ 350 ಪ್ರತಿಗಳನ್ನು ಇದರೊಂದಿಗೆ ಲಗತ್ತಿಸಿ ಮುಂದಿನ ಕ್ರಮಕ್ಕಾಗಿ ತಮಗೆ ಕಳುಹಿಸಲು ನಿರ್ದೇಶಿತನಾಗಿದ್ದೇನೆ.

ತಮ್ಮ ನಂಬುಗೆಯ

ಕೆ. ಮಂಜುನಾಥ 12/2/19
(ಕೆ. ಮಂಜುನಾಥ)
ಸರ್ಕಾರದ ಅಧೀನ ಕಾರ್ಯದರ್ಶಿ (ಪ್ರ),
ಆಹಾರ ನಾಗರಿಕ ಸರಬರಾಜು ಗ್ರಾಹಕರ ವ್ಯವಹಾರಗಳ
ಮತ್ತು ಕಾನೂನು ಮಾಪನ ಶಾಸ್ತ್ರ ಇಲಾಖೆ.

# ಕರ್ನಾಟಕ ವಿಧಾನ ಸಭೆ

| | |
|---|---|
| ಚುಕ್ಕೆ ಗುರುತಿನ ಪ್ರಶ್ನೆ ಸಂಖ್ಯೆ | 118 |
| ವಿಧಾನ ಸಭೆ ಸದಸ್ಯರ ಹೆಸರು | ಶ್ರೀ ಅಪ್ಪಚ್ಚು (ರಂಜನ್) ಎಂ.ಪಿ.(ಮಡಿಕೇರಿ) |
| ಉತ್ತರಿಸಬೇಕಾದ ದಿನಾಂಕ | 13.02.2019 |
| ಉತ್ತರಿಸುವ ಸಚಿವರು | ಆಹಾರ ನಾಗರೀಕ ಸರಬರಾಜು ಮತ್ತು ಗ್ರಾಹಕರ ವ್ಯವಹಾರಗಳ ಹಾಗೂ ಕಾನೂನು ಮಾಪನಶಾಸ್ತ್ರ ಇಲಾಖಾ ಸಚಿವರು. |

<table>
<tr><th>ಕ್ರ.ಸಂ</th><th>ಪ್ರಶ್ನೆ</th><th>ಉತ್ತರ</th></tr>
<tr>
<td>ಅ)</td>
<td>ಕಳೆದ ಮೂರು ವರ್ಷಗಳಿಂದ ಕೊಡಗು ಜಿಲ್ಲೆಯಲ್ಲಿ ಬಿ.ಪಿ.ಎಲ್ ಪಡಿತರ ಚೀಟಿ ಕೋರಿ ಅರ್ಜಿ ಸಲ್ಲಿಸಿದವರ ಸಂಖ್ಯೆ ಎಷ್ಟು; ಈ ಪೈಕಿ ಎಷ್ಟು ಜನರಿಗೆ ಬಿ.ಪಿ.ಎಲ್ ಪಡಿತರ ಚೀಟಿ ವಿತರಿಸಲಾಗಿದೆ; ಪಡಿತರ ಚೀಟಿ ವಿತರಿಸಲು ಅನುಸರಿಸುವ ಮಾನದಂಡವೇನು; (ವಿವರ ನೀಡುವುದು)</td>
<td>ಕೊಡಗು ಜಿಲ್ಲೆಗೆ ಸಂಬಂಧಿಸಿದಂತೆ ಪಡಿತರ ಚೀಟಿಗಾಗಿ ಅರ್ಜಿಗಳನ್ನು ಸಲ್ಲಿಸಿರುವ ಹಾಗೂ ಪಡಿತರ ಚೀಟಿಗಳನ್ನು ವಿತರಿಸಿರುವ ಮಾಹಿತಿ ಈ ಕೆಳಕಂಡಂತೆ:
<table>
<tr><th>ವರ್ಷ</th><th>ವರ್ಗ</th><th>ಸ್ವೀಕರಿಸಿದ ಅರ್ಜಿಗಳ ಸಂಖ್ಯೆ</th><th>ವಿತರಿಸಿದ ಪಡಿತರ ಚೀಟಿಗಳ ಸಂಖ್ಯೆ</th></tr>
<tr><td>2016</td><td colspan="3">2016 ನೇ ಸಾಲಿನಲ್ಲಿ ತಾತ್ಕಾಲಿಕವಾಗಿ ಪಡಿತರ ಚೀಟಿಗಾಗಿ ಅರ್ಜಿಗಳನ್ನು ಸ್ವೀಕರಿಸುವ ಮತ್ತು ಪಡಿತರ ಚೀಟಿಗಳ ವಿತರಣೆಯನ್ನು ತಡೆಹಿಡಿಯಲಾಗಿತ್ತು.</td></tr>
<tr><td>2017</td><td rowspan="2">ಪಿ.ಹೆಚ್.ಹೆಚ್ (ಬಿ.ಪಿ.ಎಲ್)</td><td>14460</td><td>12922</td></tr>
<tr><td>2018</td><td>6690</td><td>2964</td></tr>
<tr><td></td><td>ಒಟ್ಟು</td><td>21,150</td><td>15886</td></tr>
</table>
ಸರ್ಕಾರದಿಂದ ನೈಜವಾದ ಫಲಾನುಭವಿಗಳಿಗೆ ಪಡಿತರ ಚೀಟಿ ದೊರಕುವಂತೆ ಅವಕಾಶ ಕಲ್ಪಿಸಲು ಪರಿಷ್ಕೃತ ಮಾನದಂಡಗಳನ್ನು ತರಲಾಗಿದೆ. ಸರ್ಕಾರದ ಆದೇಶಗಳ ಸಂಖ್ಯೆ: ಆನಾಸ/116/ಡಿಆರ್‌ಎ/2015 ದಿನಾಂಕ:25.03.2017 ಮತ್ತು ದಿನಾಂಕ:20.05.2017ರನ್ವಯ ಈ ಕೆಳಕಂಡ ಮಾನದಂಡಗಳನ್ನು ಅನುಸರಿಸಿ ಆದ್ಯತೇತರ ಕುಟುಂಬಗಳನ್ನು ಗುರುತಿಸಲಾಗುತಿದೆ.<br>
1. ವೇತನವನ್ನು ಗಣನೆಗೆ ತೆಗೆದುಕೊಳ್ಳದೆ ಎಲ್ಲಾ ಖಾಯಂ ನೌಕರರು ಅಂದರೆ ಸರ್ಕಾರದ ಅಥವಾ ಸರ್ಕಾರದಿಂದ ಅನುದಾನವನ್ನು ಪಡೆಯುತ್ತಿರುವ ಸಂಸ್ಥೆಗಳು ಅಥವಾ ಸರ್ಕಾರಿ ಪ್ರಯೋಜಿತ, ಸರ್ಕಾರಿ ಸ್ವಾಮ್ಯದ ಸಂಸ್ಥೆಗಳು / ಮಂಡಳಿಗಳು / ನಿಗಮಗಳು / ಸ್ವಾಯುತ್ತ ಸಂಸ್ಥೆಗಳು ಇತ್ಯಾದಿ ಒಳಗೊಂಡಂತೆ ಆದಾಯ ತೆರಿಗೆ / ಸೇವಾ ತೆರಿಗೆ / ವ್ಯಾಟ್/ ವೃತ್ತಿ ತೆರಿಗೆ ಪಾವತಿಸುವ ಎಲ್ಲಾ ಕುಟುಂಬಗಳು.<br>
2. ಗ್ರಾಮೀಣ ಪ್ರದೇಶದಲ್ಲಿ 3 ಹೆಕ್ಟೇರ್ ಒಣ ಭೂಮಿ ಅಥವಾ ತತ್ಸಮಾನ ನೀರಾವರಿ ಭೂಮಿ ಹೊಂದಿರುವ ಕುಟುಂಬಗಳು ಅಥವಾ ಗ್ರಾಮೀಣ ಪ್ರದೇಶವನ್ನು ಹೊರತುಪಡಿಸಿ ನಗರ</td>
</tr>
</table>

| | | |
|---|---|---|
| | | ಪ್ರದೇಶದಲ್ಲಿ 1000 ಚದರ ಅಡಿಗಿಂತಲೂ ಹೆಚ್ಚಿನ ವಿಸ್ತೀರ್ಣದ ಪಕ್ಕಾ ಮನೆಯನ್ನು ಸ್ವಂತವಾಗಿ ಹೊಂದಿರುವ ಕುಟುಂಬಗಳು.<br><br>3. ಜೀವನೋಪಾಯಕ್ಕಾಗಿ ಸ್ವತಃ ಓಡಿಸುವ ಒಂದು ವಾಣಿಜ್ಯ ವಾಹನವನ್ನು ಅಂದರೆ ಟ್ರಾಕ್ಟರ್, ಮ್ಯಾಕ್ಸಿಕ್ಯಾಬ್, ಟ್ಯಾಕ್ಸಿ ಇತ್ಯಾದಿಗಳನ್ನು ಹೊಂದಿದ ಕುಟುಂಬವನ್ನು ಹೊರತುಪಡಿಸಿ ನಾಲ್ಕು ಚಕ್ರದ ವಾಹನವನ್ನು ಹೊಂದಿರುವ ಎಲ್ಲಾ ಕುಟುಂಬಗಳು.<br>4. ಕುಟುಂಬದ ವಾರ್ಷಿಕ ಆದಾಯವು ರೂ.1.20 ಲಕ್ಷಕ್ಕಿಂತಲೂ ಹೆಚ್ಚು ಇರುವ ಕುಟುಂಬಗಳು.<br><br>ಈ ಮೇಲೆ ತಿಳಿಸಿರುವಂತೆ ಗುರುತಿಸಲಾದ ಆದ್ಯತೇತರ(ಎ.ಪಿ.ಎಲ್) ಕುಟುಂಬಗಳನ್ನು ಹೊರತು ಪಡಿಸಿ ಉಳಿದ ಕುಟುಂಬಗಳು ಆದ್ಯತಾ (ಬಿ.ಪಿ.ಎಲ್) ಪಡಿತರ ಚೀಟಿಯನ್ನು ಪಡೆಯಲು ಅರ್ಹ ಕುಟುಂಬವೆಂದು ಪರಿಗಣಿಸಲಾಗುವುದು. |
| ಆ) | ಬಿ.ಪಿ.ಎಲ್ ಪಡಿತರ ಚೀಟಿ ಹೊಂದಿದವರಿಗೆ ಎಷ್ಟು ಪ್ರಮಾಣದ ಯಾವ ಯಾವ ಆಹಾರ ಧಾನ್ಯವನ್ನು ನೀಡಲಾಗುತ್ತದೆ; | ಪ್ರಸ್ತುತ ಅನ್ನಭಾಗ್ಯ ಯೋಜನೆಯಡಿ (ಬಿ.ಪಿ.ಎಲ್) ಪಡಿತರ ಚೀಟಿಯಲ್ಲಿನ ಪ್ರತಿ ಸದಸ್ಯರಿಗೆ 7 ಕೆ.ಜಿ.ಅಕ್ಕಿ ಉಚಿತವಾಗಿ ಹಾಗೂ ಪ್ರತೀ ಕುಟುಂಬಕ್ಕೆ 1.ಕೆ.ಜಿ. ತೊಗರಿಬೇಳೆಯನ್ನು [illegible] ದರದಲ್ಲಿ ವಿತರಿಸಲಾಗುತ್ತಿದೆ. |
| ಇ) | ಆಹಾರ ಧಾನ್ಯ ಪೂರೈಕೆಯಲ್ಲಿ ಅಕ್ರಮವೆಸಗಿರುವ ಬಗ್ಗೆ ದಾಖಲಾಗಿರುವ ಪ್ರಕರಣಗಳೆಷ್ಟು; ಇವರ ವಿರುದ್ಧ ಕೈಗೊಂಡ ಕ್ರಮಗಳಾವುವು; (ಪೂರ್ಣ ವಿವರ ನೀಡುವುದು) | 2014-15 ನೇ ಸಾಲಿನಲ್ಲಿ ವಿರಾಜಪೇಟೆ ತಾಲ್ಲೂಕಿನಲ್ಲಿ ಒಂದು ಪ್ರಕರಣ ದಾಖಲಾಗಿದ್ದು, ಸದರಿ ಪ್ರಕರಣವು ಈಗ ಪೊನ್ನಂಪೇಟ್ ಸ್ಥಳೀಯ ನ್ಯಾಯಾಲಯದಲ್ಲಿ ವಿಚಾರಣೆ ಹಂತದಲ್ಲಿದೆ. |
| ಈ) | ಕೊಡಗು ಜಿಲ್ಲೆಯಲ್ಲಿ ಎಷ್ಟು ನ್ಯಾಯಬೆಲೆ ಅಂಗಡಿಗಳು ಕಾರ್ಯಾಚರಣೆಯಲ್ಲಿದೆ; ಎಲ್ಲಾ ನ್ಯಾಯಬೆಲೆ ಅಂಗಡಿಗಳಲ್ಲಿ ಕಂಪ್ಯೂಟರ್/ಲ್ಯಾಪ್‌ಟಾಪ್ ಹೊಂದಲಾಗಿದೆಯೇ; ಹಾಗಿಲ್ಲದಿದ್ದಲ್ಲಿ, ಕೈಗೊಂಡಕ್ರಮವೇನು (ಪೂರ್ಣ ವಿವರ ನೀಡುವುದು) | ಕೊಡಗು ಜಿಲ್ಲೆಯಲ್ಲಿ ಒಟ್ಟು 294 ನ್ಯಾಯಬೆಲೆ ಅಂಗಡಿಗಳು ಕಾರ್ಯಾಚರಣೆಯಲ್ಲಿದೆ. 294 ನ್ಯಾಯಬೆಲೆ ಅಂಗಡಿಗಳ ಪೈಕಿ 121 ಪಿಓಎಸ್ (ಬಯೋ-ಮೆಟ್ರಿಕ್) ವ್ಯವಸ್ಥೆಯಿರುವ ನ್ಯಾಯಬೆಲೆ ಅಂಗಡಿಗಳಲ್ಲಿ ಲ್ಯಾಪ್ ಟಾಪ್, ಟ್ಯಾಬ್ಲೆಟ್ ಹಾಗೂ ಇಂಟರ್‌ನೆಟ್ ಬಳಕೆ ಮಾಡಿ ಪಡಿತರ ವಿತರಿಸಲಾಗುತ್ತಿದೆ.<br>ಇನ್ನುಳಿದಂತೆ ಇಂಟರ್‌ನೆಟ್ ಸೌಲಭ್ಯವನ್ನು ಆಧರಿಸಿ ಹಂತಹಂತವಾಗಿ POS ಅಂಗಡಿಗಳನ್ನಾಗಿ ಪರಿವರ್ತಿಸಲಾಗುವುದು. |

ಆನಾಸ 30 ಡಿಆರ್‌ಎ 2019

(ಬಿ. ಜೆಡ್. ಜಮೀರ್ ಅಹ್ಮದ್ ಖಾನ್)
ಆಹಾರ ನಾಗರಿಕ ಸರಬರಾಜು ಮತ್ತು ಗ್ರಾಹಕರ ವ್ಯವಹಾರಗಳ
ಹಾಗೂ ಕಾನೂನು ಮಾಪನಶಾಸ್ತ್ರ, ಅಲ್ಪ ಸಂಖ್ಯಾತರ ಕಲ್ಯಾಣ ಮತ್ತು
ವಕ್ಫ್ ಹಾಗೂ ಹಜ್ ಇಲಾಖಾ ಸಚಿವರು



# <u>ಕರ್ನಾಟಕ ಸರ್ಕಾರ</u>

ಸಂ: ನಅಇ 44 ಪಿಆರ್‌ಜೆ 2019

ಕರ್ನಾಟಕ ಸರ್ಕಾರದ ಸಚಿವಾಲಯ
ವಿಕಾಸ ಸೌಧ
ಬೆಂಗಳೂರು, ದಿನಾಂಕ: 12-02-2019

**ಇಂದ:**
ಸರ್ಕಾರದ ಅಪರ ಮುಖ್ಯ ಕಾರ್ಯದರ್ಶಿಗಳು,
ನಗರಾಭಿವೃದ್ಧಿ ಇಲಾಖೆ.

**ಇವರಿಗೆ:**
ಕಾರ್ಯದರ್ಶಿಗಳು,
ಕರ್ನಾಟಕ ವಿಧಾನ ಸಭೆ,
ಸುವರ್ಣಸೌಧ,
ಬೆಳಗಾವಿ.

ಮಾನ್ಯರೇ,

**ವಿಷಯ:** ಕರ್ನಾಟಕ ವಿಧಾನ ಸಭೆ ಸದಸ್ಯರಾದ ಶ್ರೀ ಸತೀಶ್ ರೆಡ್ಡಿ ಎಂ. (ಬೊಮ್ಮನಹಳ್ಳಿ) ಇವರು ಮಂಡಿಸಿರುವ **ಚುಕ್ಕೆ ಗುರುತಿನ ಪ್ರಶ್ನೆ ಸಂಖ್ಯೆ: 648 ರ** ಕುರಿತು.

*******

ಮೇಲ್ಕಂಡ ವಿಷಯಕ್ಕೆ ಸಂಬಂಧಿಸಿದಂತೆ, ಕರ್ನಾಟಕ ವಿಧಾನ ಸಭೆ ಸದಸ್ಯರಾದ ಶ್ರೀ ಸತೀಶ್ ರೆಡ್ಡಿ ಎಂ. (ಬೊಮ್ಮನಹಳ್ಳಿ) ಇವರು ಮಂಡಿಸಿರುವ **ಚುಕ್ಕೆ ಗುರುತಿನ ಪ್ರಶ್ನೆ ಸಂಖ್ಯೆ: 648** ಕ್ಕೆ ಕನ್ನಡ ಮತ್ತು ಆಂಗ್ಲ ಭಾಷೆಯಲ್ಲಿ ಸಿದ್ಧಪಡಿಸಿರುವ ಉತ್ತರದ 350 ಪ್ರತಿಗಳನ್ನು ಇದರೊಂದಿಗೆ ಲಗತ್ತಿಸಿ ಕಳುಹಿಸಲು ನಾನು ನಿರ್ದೇಶಿಸಲ್ಪಟ್ಟಿದ್ದೇನೆ.

ತಮ್ಮ ನಂಬುಗೆಯ,

ಲಲಿತಾಬಾಯಿ. ಕೆ

**( ಲಲಿತಾಬಾಯಿ. ಕೆ)**
ಸರ್ಕಾರದ ಅಧೀನ ಕಾರ್ಯದರ್ಶಿ(ಪಿ.ಎಂ.ಸಿ),
ನಗರಾಭಿವೃದ್ಧಿ ಇಲಾಖೆ

## ಕರ್ನಾಟಕ ವಿಧಾನ ಸಭೆ

1. ಚುಕ್ಕೆ ಗುರುತಿನ ಪ್ರಶ್ನೆ : 648
2. ಸದಸ್ಯರ ಹೆಸರು : ಶ್ರೀ ಸತೀಶ್ ರೆಡ್ಡಿ ಎಂ. (ಬೊಮ್ಮನಹಳ್ಳಿ)
3. ಉತ್ತರಿಸಬೇಕಾದ ದಿನಾಂಕ : 13-02-2019.
4. ಉತ್ತರಿಸುವ ಸಚಿವರು : ಮಾನ್ಯ ಉಪ ಮುಖ್ಯಮಂತ್ರಿಗಳು

| ಕ್ರ. ಸಂ. | ಪ್ರಶ್ನೆ | ಉತ್ತರ |
|---|---|---|
| (ಅ) | ಹೊಸೂರು ರಸ್ತೆ-ಬನ್ನೇರುಘಟ್ಟ ರಸ್ತೆ-ಸರ್ಜಾಪುರ ರಸ್ತೆಯಲ್ಲಿ ಮೆಟ್ರೋ ಕಾಮಗಾರಿ ಯಾವಾಗ ಆರಂಭವಾಗಿದೆ; ಕಾಮಗಾರಿ ಯಾವಾಗ ಮುಕ್ತಾಯವಾಗಲಿದೆ (ವಿವರ ನೀಡುವುದು); | ಹೊಸೂರು ರಸ್ತೆಗೆ ಸಂಬಂಧಿಸಿದಂತೆ, ಬೆಂಗಳೂರು ಮೆಟ್ರೋ ರೈಲು ಯೋಜನೆ ಹಂತ-2, ರೀಚ್-5 ಆರ್.ವಿ. ರಸ್ತೆಯಿಂದ ಬೊಮ್ಮಸಂದ್ರದ ವರೆಗಿನ ಕಾಮಗಾರಿಯು 09.06.2017 ರಂದು ಪ್ರಾರಂಭವಾಗಿದ್ದು, ಮಾರ್ಚ್ 2022ರ ವೇಳೆಗೆ ಪೂರ್ಣಗೊಳಿಸಲು ಕ್ರಮವಹಿಸಲಾಗಿದೆ.<br><br>ಬನ್ನೇರುಘಟ್ಟ ರಸ್ತೆಗೆ ಸಂಬಂಧಿಸಿದಂತೆ, ಬೆಂಗಳೂರು ಮೆಟ್ರೋ ರೈಲು ಯೋಜನೆ ಹಂತ-2, ರೀಚ್-6 ಗೊಟ್ಟಿಗೆರೆಯಿಂದ ಸ್ವಾಗತ್ ರೋಡ್ ಕ್ರಾಸ್‌ವರೆಗಿನ ಕಾಮಗಾರಿಯು ದಿನಾಂಕ:26.10.2017 ರಂದು ಪ್ರಾರಂಭವಾಗಿದ್ದು, ಜೂನ್ 2022ರ ವೇಳೆಗೆ ಪೂರ್ಣಗೊಳಿಸಲು ಕ್ರಮವಹಿಸಲಾಗಿದೆ.<br><br>ಸರ್ಜಾಪುರ ರಸ್ತೆಗೆ ಸಂಬಂಧಿಸಿದಂತೆ, ಬೆಂಗಳೂರು ಮೆಟ್ರೋರೈಲು ಯೋಜನೆ ಹಂತ-3ರಲ್ಲಿ ಇಬ್ಬಲೂರಿನಿಂದ ಕಾರ್ಮೆಲರಾಮ್ ರೈಲ್ವೆ ಸ್ಟೇಷನ್ ಮಾರ್ಗದ ಕಾರ್ಯಸಾಧ್ಯತೆ ಬಗ್ಗೆ ಅಧ್ಯಯನ ನಡೆಸಲಾಗುವುದು. ಪ್ರಸ್ತುತ ಈ ಮಾರ್ಗದಲ್ಲಿ ಯಾವುದೇ ಮೆಟ್ರೋ ಕಾಮಗಾರಿಯು ಪ್ರಾರಂಭಿಸಿರುವುದಿಲ್ಲ. |
| (ಆ) | ಕಾಮಗಾರಿಯಿಂದಾಗಿ ವಾಹನ ದಟ್ಟಣೆ ಹೆಚ್ಚಾಗಿದ್ದು, ದಟ್ಟಣೆ ನಿಯಂತ್ರಿಸಲು ಕೈಗೊಂಡಿರುವ ಪರ್ಯಾಯ ಕ್ರಮಗಳೇನು (ವಿವರ ನೀಡುವುದು)? | ಮೆಟ್ರೋ ಕಾಮಗಾರಿಗಳು ನಡೆಯುವ ಸ್ಥಳದಲ್ಲಿ ವಾಹನ ಸಂಚಾರ ದಟ್ಟಣೆ ನಿಯಂತ್ರಿಸಲು ಈ ಕೆಳಕಂಡ ಕ್ರಮಗಳನ್ನು ತೆಗೆದುಕೊಳ್ಳಲಾಗಿದೆ:<br>➢ ಕಾಮಗಾರಿಗಳು ಪ್ರಾರಂಭಿಸುವ ಮುನ್ನ ರಸ್ತೆ ಅಗಲೀಕರಣ ಮಾಡಿ ನಂತರ ಕಾಮಗಾರಿ ಪ್ರಾರಂಭಿಸಲಾಗುತ್ತದೆ.<br>➢ ಮೆಟ್ರೋ ಕಾಮಗಾರಿಗಳು ನಡೆಯುತ್ತಿರುವ ಸ್ಥಳಗಳಲ್ಲಿ ಸಂಚಾರದ ಚೌಕಟ್ಟುಗಳು ಮತ್ತು ರಸ್ತೆ ತಿರುವುಗಳಲ್ಲಿ ಮಾರ್ಷಲ್‌ರವರನ್ನು ವಾಹನ ದಟ್ಟಣೆ ನಿಯಂತ್ರಿಸುವ ಸಲುವಾಗಿ ನಿಯೋಜಿಸಲಾಗಿದೆ. |

ನಅಇ 44 ಪಿಆರ್‌ಜೆ 2019

(ಜಿ. ಪರಮೇಶ್ವರ್)
ಉಪ ಮುಖ್ಯಮಂತ್ರಿಗಳು

## KARNATAKA LEGISLATIVE ASSEMBLY

| | | | |
|---|---|---|---|
| 1 | Starred Question No | : | 648 |
| 2 | Name of the Member | : | Shri Saieesh Reddy.M (Bommanahalli) |
| 3 | Date of Reply | : | 13-02-2019 |
| 4 | To be Replied by | : | Hon'ble Deputy Chief Minister |

| SL No. | QUESTION | ANSWER |
|---|---|---|
| (A) | When did the Metro works at Hosur road, Bannergatta road and Sarjapur Road start and when will be completing? (furnish details) | The Bengaluru Metro Rail Project pertaining to Hosur road from R.V. Road to Bommasandra under Phase-2, Reach-5, the works have been started on 09.06.2017 and it is proposed to be completed by March, 2022.<br><br>The Bengaluru Metro Rail Project pertaining to Bannergatta road from Gottigere to Swagath Road Cross under Phase-2, Reach-6, the works have been started on 26.10.2017 and it is proposed to be completed by June, 2022.<br><br>The Bengaluru Metro Rail Project pertaining to Sarjapur Road under Phase-3 from Iblur to Carmelram Railway Station, the Alignment Feasibility Study is under progress. At present, there is no work-in-progress in this stretch. |
| (B) | What are the precautions taken to ease the increased traffic congestion in view of the Metro construction works. (furnish details) | The following precautionary measures were taken to ease the increased traffic congestion at Metro constructions sites:<br>➢ Road widening has been done before starting the works.<br>➢ Marshals are deployed at the traffic inter sections and road diversions. |

UDD 44 PRJ 2019

Sd/-
( G. PARAMESHWARA )
Deputy Chief Minister.

# ಕರ್ನಾಟಕ ಸರ್ಕಾರ

ಸಂಖ್ಯೆ: ಒಇ 74 ಪೊಸಿಪ 2019

ಕರ್ನಾಟಕ ಸರ್ಕಾರದ ಸಚಿವಾಲಯ,
ವಿಧಾನಸೌಧ,
ಬೆಂಗಳೂರು, ದಿನಾಂಕ 12-02-2019.

**ಇವರಿಂದ:**
ಸರ್ಕಾರದ ಅಪರ ಮುಖ್ಯ ಕಾರ್ಯದರ್ಶಿ,
ಒಳಾಡಳಿತ ಇಲಾಖೆ.
ಬೆಂಗಳೂರು.

**ಇವರಿಗೆ:**
ಕಾರ್ಯದರ್ಶಿ,
ಕರ್ನಾಟಕ ವಿಧಾನ ಸಭಾ ಸಚಿವಾಲಯ,
ವಿಧಾನ ಸೌಧ,
ಬೆಂಗಳೂರು.

ಮಾನ್ಯರೆ,

**ವಿಷಯ** : ಮಾನ್ಯ ವಿಧಾನ ಸಭಾ ಸದಸ್ಯರಾದ ಶ್ರೀ ಗೂಳಿಹಟ್ಟಿ ಡಿ. ಶೇಖರ್, ಇವರ ಚುಕ್ಕೆ ಗುರುತಿನ ಪ್ರಶ್ನೆ ಸಂಖ್ಯೆ: 780ಕ್ಕೆ ಉತ್ತರ ಒದಗಿಸುವ ಬಗ್ಗೆ.

*****

ಮಾನ್ಯ ವಿಧಾನ ಸಭಾ ಸದಸ್ಯರಾದ ಶ್ರೀ ಗೂಳಿಹಟ್ಟಿ ಡಿ. ಶೇಖರ್, ಇವರ ಚುಕ್ಕೆ ಗುರುತಿನ ಪ್ರಶ್ನೆ ಸಂಖ್ಯೆ: 780ಕ್ಕೆ ಸಂಬಂಧಿಸಿದಂತೆ ಉತ್ತರದ 350 ಪ್ರತಿಗಳನ್ನು ಇದರೊಂದಿಗೆ ಲಗತ್ತಿಸಿ ಮುಂದಿನ ಕ್ರಮಕ್ಕಾಗಿ ಕಳುಹಿಸಲು ನಿರ್ದೇಶಿತನಾಗಿದ್ದೇನೆ.

ತಮ್ಮ ನಂಬುಗೆಯ,
A. Vijayakumar 12/02/2019
(ಎ. ವಿಜಯಕುಮಾರ್)
ಸರ್ಕಾರದ ಅಧೀನಸ ಕಾರ್ಯದರ್ಶಿ (ಪ್ರ),
ಒಳಾಡಳಿತ ಇಲಾಖೆ (ಪೊಲೀಸ್ ಸೇವೆಗಳು-ಎ).

12/02/19

# ಕರ್ನಾಟಕ ವಿಧಾನಸಭೆ

| | | | |
|---|---|---|---|
| 1 | ಚುಕ್ಕೆ ಗುರುತಿನ ಪ್ರಶ್ನೆ ಸಂಖ್ಯೆ | : | 780 |
| 2 | ಸದಸ್ಯರ ಹೆಸರು | : | ಶ್ರೀ ಗೂಳಿಹಟ್ಟಿ ಡಿ. ಶೇಖರ್ (ಹೊಸದುರ್ಗ) |
| 3 | ಉತ್ತರಿಸುವ ದಿನಾಂಕ | : | 13-02-2019 |
| 4 | ಉತ್ತರಿಸುವ ಸಚಿವರು | : | ಗೃಹ ಸಚಿವರು |

| ಕ್ರ ಸಂ. | ಪ್ರಶ್ನೆ | ಉತ್ತರ |
|---|---|---|
| ಅ) | ರಾಜ್ಯದಲ್ಲಿ ಡಿವೈ.ಎಸ್.ಪಿ., ಪೊಲೀಸ್ ಇನ್ಸ್‌ಪೆಕ್ಟರ್ ಮತ್ತು ಸಬ್ ಇನ್ಸ್‌ಪೆಕ್ಟರ್‌ಗಳನ್ನು ವರ್ಗಾವಣೆ ಮಾಡಲು ಅನುಸರಿಸುವ ಮಾನದಂಡಗಳೇನು; (ನಿಯಮಗಳ ಮಾಹಿತಿ ಒದಗಿಸುವುದು) | ಮಾನ್ಯ ಸರ್ವೋಚ್ಚ ನ್ಯಾಯಾಲಯವು ಪ್ರಕಾಶ್ ಸಿಂಗ್ ಪ್ರಕರಣದಲ್ಲಿ ನೀಡಿದ ನಿರ್ದೇಶನಗಳನ್ನು ಗಮನದಲ್ಲಿರಿಸಿಕೊಂಡು ದಿನಾಂಕ: 02.06.2012 ರಿಂದ ಜಾರಿಗೆ ಬಂದ ಕರ್ನಾಟಕ ಪೊಲೀಸ್ (ತಿದ್ದುಪಡಿ) ಅಧಿನಿಯಮ, 2012ರ ಅನುಸಾರ ಜಾರಿಗೊಂಡ ಕಲಂ 20ಬಿ ರಲ್ಲಿ ಪೊಲೀಸ್ ಸಿಬ್ಬಂದಿ ಮಂಡಳಿಯನ್ನು ರಚಿಸಲು ಅವಕಾಶ ಕಲ್ಪಿಸಲಾಗಿದೆ. ಪೊಲೀಸ್ ಮಹಾ ನಿರ್ದೇಶಕರು ಮತ್ತು ಆರಕ್ಷಕ ಮಹಾ ನಿರೀಕ್ಷಕರು ಇವರ ಅಧ್ಯಕ್ಷತೆಯ ಈ ಮಂಡಳಿಯು ಪೊಲೀಸ್ ಇಲಾಖೆಯ ಮೂವರು ಹಿರಿಯ ಅಧಿಕಾರಿಗಳನ್ನು ಸದಸ್ಯರನ್ನಾಗಿ ಹೊಂದಿದ್ದು, ಹೆಚ್ಚುವರಿ ಪೊಲೀಸ್ ಮಹಾ ನಿರ್ದೇಶಕರು (ಆಡಳಿತ) ಇವರು ಮಂಡಳಿಯ ಕನ್ವೀನರ್ ಆಗಿರುತ್ತಾರೆ. ಈ ಮಂಡಳಿಯು ಪೊಲೀಸ್ ಇಲಾಖೆಯ ಡಿವೈಎಸ್‌ಪಿ ಮತ್ತು ಕೆಳಗಿನ ಅಧಿಕಾರಿಗಳ ವರ್ಗಾವಣೆ ಬಗ್ಗೆ ನಿರ್ಣಯಗಳನ್ನು ಕೈಗೊಳ್ಳುತ್ತದೆ. ಮೇಲೆ ತಿಳಿಸಲಾದ 2012ರ ಅಧಿನಿಯಮದಲ್ಲಿ ಪರಿಚಯಿಸಲಾದ ಹಾಗೂ ದಿನಾಂಕ: 04.07.2013 ರಿಂದ ಜಾರಿಗೆ ಬಂದ ಕರ್ನಾಟಕ ಪೊಲೀಸ್ (ತಿದ್ದುಪಡಿ) ಅಧಿನಿಯಮ, 2013ರಲ್ಲಿ ತಿದ್ದುಪಡಿಗೊಂಡ ಕಲಂ 20ಎಫ್ ರಲ್ಲಿ ತಿಳಿಸಲಾದ ಅಂಶಗಳಿಗೆ ಬದ್ಧಗೊಂಡು, ಪ್ರತಿಯೊಂದು ಪ್ರಕರಣಗಳ ಬಗ್ಗೆ ಚರ್ಚಿಸಿ, ಸರ್ಕಾರದಿಂದ ಕಾಲಕಾಲಕ್ಕೆ ನೀಡುವ ವರ್ಗಾವಣೆ ಮಾರ್ಗಸೂಚಿಗಳನ್ನು ಅನುಸರಿಸಿ ಪೊಲೀಸ್ ಸಿಬ್ಬಂದಿ ಮಂಡಳಿಯು ವರ್ಗಾವಣೆಗಳನ್ನು ಕೈಗೊಳ್ಳುತ್ತದೆ.<br><br>ಸರ್ಕಾರದ ಆದೇಶ ಸಂಖ್ಯೆ: ಒಇ 111 ಪೊಸಇ 2014, ದಿನಾಂಕ: 16.09.2014 ರಲ್ಲಿ ಪೊಲೀಸ್ ಇಲಾಖೆಯ ಅಧಿಕಾರಿ/ ನೌಕರರ ವರ್ಗಾವಣೆ ಬಗ್ಗೆ ಮಾರ್ಗಸೂಚಿಗಳನ್ನು ಹೊರಡಿಸಲಾಗಿರುತ್ತದೆ. ಮುಂದುವರೆದು, ಪೊಲೀಸ್ ಕಮೀಷನರೇಟ್‌ಗಳಲ್ಲಿ ಸೇವೆ ಸಲ್ಲಿಸುವ ಅಧಿಕಾರಿಗಳ ವರ್ಗಾವಣೆಗೆ ಸಂಬಂಧಿಸಿದಂತೆ ದಿನಾಂಕ: 25.06.2015ರ ಸರ್ಕಾರಿ ಆದೇಶದಲ್ಲಿ ನಿರ್ದೇಶನಗಳನ್ನು ನೀಡಲಾಗಿರುತ್ತದೆ. ಈ ಸಂಬಂಧ ದಿನಾಂಕ: 07.11.2018 ಮತ್ತು 14.11.2018ರ ಆದೇಶಗಳಲ್ಲಿ ಹೆಚ್ಚುವರಿ ನಿರ್ದೇಶನಗಳನ್ನು ನೀಡಲಾಗಿರುತ್ತದೆ.<br><br>ಕರ್ನಾಟಕ ಪೊಲೀಸ್ ಅಧಿನಿಯಮದ ಕಲಂ 20ಎಫ್ ಮತ್ತು ಮೇಲೆ ತಿಳಿಸಲಾದ ಸರ್ಕಾರಿ ಆದೇಶಗಳಲ್ಲಿ ನೀಡಿರುವ ಮಾರ್ಗಸೂಚಿಗಳನ್ನು ಗಮನದಲ್ಲಿರಿಸಿಕೊಂಡು ಪೊಲೀಸ್ ಸಿಬ್ಬಂದಿ ಮಂಡಳಿಯಲ್ಲಿ ಡಿವೈಎಸ್‌ಪಿ ಮತ್ತು ಪೊಲೀಸ್ ಇನ್ಸ್‌ಪೆಕ್ಟರ್ ವೃಂದದ ಅಧಿಕಾರಿಗಳ ವರ್ಗಾವಣೆಯನ್ನು ಮಾಡಲಾಗುತ್ತಿದೆ. ಮುಂದುವರೆದು, ಈ ಮಂಡಳಿಯ ಸಭೆಯಲ್ಲಿ ತೆಗೆದುಕೊಳ್ಳಲಾಗುವ ನಿರ್ಧಾರಗಳ ಆಧಾರದ ಮೇಲೆ ಪೊಲೀಸ್ ಸಬ್-ಇನ್ಸ್‌ಪೆಕ್ಟರ್‌ರವರುಗಳನ್ನು ವರ್ಗಾವಣೆ ಮಾಡಲಾಗುತ್ತಿದೆ ಹಾಗೂ ವಲಯ/ ಘಟಕಗಳ ಒಳಗೆ ಮಾಡಬಹುದಾದ ಸಬ್-ಇನ್ಸ್‌ಪೆಕ್ಟರ್‌ಗಳ ವರ್ಗಾವಣೆ ಮಾಡಲು ವಲಯ ಮಟ್ಟದ ಮತ್ತು ಜಿಲ್ಲಾ ಮಟ್ಟದ ಉಪ ಸಮಿತಿಗಳನ್ನು ರಚಿಸಲಾಗಿದ್ದು, ಸದರಿ ಸಮಿತಿಗಳು ಸರ್ಕಾರದ ಮಾರ್ಗಸೂಚಿಗಳನ್ವಯ ಸಬ್-ಇನ್ಸ್‌ಪೆಕ್ಟರ್‌ರವರುಗಳ ವರ್ಗಾವಣೆಗಳನ್ನು ಮಾಡುತ್ತಿವೆ. |

ಸಂಖ್ಯೆ: ಒಇ 74 ಪೊಸಿಪ 2019

(ಎಂ.ಬಿ. ಪಾಟೀಲ)
ಗೃಹ ಸಚಿವರು

ಕರ್ನಾಟಕ ಸರ್ಕಾರ

966

ಸಂಖ್ಯೆ: ಲೋಇ 10 ಸಿಕ್ಯೂಎನ್ 2019

ಕರ್ನಾಟಕ ಸರ್ಕಾರದ ಸಚಿವಾಲಯ,
ವಿಕಾಸ ಸೌಧ,
ಬೆಂಗಳೂರು, ದಿನಾಂಕ:12.02.2019

09
13/2/19

**ಇವರಿಂದ,**
ಸರ್ಕಾರದ ಅಪರ ಮುಖ್ಯ ಕಾರ್ಯದರ್ಶಿಗಳು,
ಲೋಕೋಪಯೋಗಿ, ಬಂದರು ಮತ್ತು
ಒಳನಾಡು ಜಲಸಾರಿಗೆ ಇಲಾಖೆ,
ವಿಕಾಸಸೌಧ, ಬೆಂಗಳೂರು.

**ಇವರಿಗೆ,**
ಕಾರ್ಯದರ್ಶಿಗಳು,
ಕರ್ನಾಟಕ ವಿಧಾನ ಸಭೆ,
ವಿಧಾನ ಸೌಧ,
ಬೆಂಗಳೂರು.

ಮಾನ್ಯರೇ,

**ವಿಷಯ:** ಮಾನ್ಯ ವಿಧಾನ ಸಭಾ ಸದಸ್ಯರಾದ **ಶ್ರೀ ಸಂಜೀವ ಮಠಂದೂರ್(ಪುತ್ತೂರು)** ಇವರ ಚುಕ್ಕೆ ಗುರುತಿಲ್ಲದ ಪ್ರಶ್ನೆ **ಸಂಖ್ಯೆ: 966** ಕ್ಕೆ ಉತ್ತರಿಸುವ ಕುರಿತು.
**ಉಲ್ಲೇಖ:** ತಮ್ಮ ಪತ್ರ ಸಂಖ್ಯೆ: ಪ್ರಶಾವಿಸ/**15**ನೇವಿಸ/**3**ಅ/ಪ್ರ.ಸಂ.**966**/2019 ದಿ:05.02.2019.

********

ಮೇಲ್ಕಂಡ ವಿಷಯಕ್ಕೆ ಸಂಬಂಧಿಸಿದಂತೆ, ಮಾನ್ಯ ವಿಧಾನ ಸಭಾ ಸದಸ್ಯರಾದ **ಶ್ರೀ ಸಂಜೀವ ಮಠಂದೂರ್ (ಪುತ್ತೂರು)** ಇವರ ಚುಕ್ಕೆ ಗುರುತಿಲ್ಲದ ಪ್ರಶ್ನೆ **ಸಂಖ್ಯೆ: 966** ಕ್ಕೆ ಉತ್ತರದ 350 ಪ್ರತಿಗಳನ್ನು ಇದರೊಂದಿಗೆ ಲಗತ್ತಿಸಿ ಮುಂದಿನ ಕ್ರಮಕ್ಕಾಗಿ ತಮಗೆ ಕಳುಹಿಸಲು ನಿರ್ದೇಶಿತನಾಗಿದ್ದೇನೆ.

ತಮ್ಮ ನಂಬುಗೆಯ,

12/2/19
**(ಯೋಗಾನಂದ.ಎಸ್)**
**ಶಾಖಾಧಿಕಾರಿಗಳು**
ಲೋಕೋಪಯೋಗಿ, ಬಂದರು ಮತ್ತು ಒಳನಾಡು
ಜಲಸಾರಿಗೆ ಇಲಾಖೆ (ಸಂಪರ್ಕ-1).

12/2/19

## ಕರ್ನಾಟಕ ವಿಧಾನಸಭೆ
## 15ನೇ ವಿಧಾನಸಭೆ, 3ನೇ ಅಧಿವೇಶನ

**ಚುಕ್ಕೆ ಗುರುತಿನ ಪ್ರಶ್ನೆ ಸಂಖ್ಯೆ:** 966
ಸದಸ್ಯರ ಹೆಸರು **ಶ್ರೀ ಸಂಜೀವ ಮಠಂದೂರ್ (ಪುತ್ತೂರು)**
ಉತ್ತರಿಸುವ ದಿನಾಂಕ: **13.02.2019**
ಉತ್ತರಿಸುವ ಸಚಿವರು: **ಲೋಕೋಪಯೋಗಿ ಸಚಿವರು**

| ಕ್ರಮ ಸಂಖ್ಯೆ | ಪ್ರಶ್ನೆಗಳು | ಉತ್ತರಗಳು |
|---|---|---|
| ಅ) | ಪುತ್ತೂರು ವಿಧಾನಸಭಾ ಕ್ಷೇತ್ರದಲ್ಲಿ ಲೋಕೋಪಯೋಗಿ ಇಲಾಖೆಯಿಂದ ಗ್ರಾಮೀಣ ಭಾಗದ ರಸ್ತೆಯನ್ನು ಮೇಲ್ದರ್ಜೆಗೇರಿಸುವ ಪ್ರಸ್ತಾವನೆ ಸರ್ಕಾರದ ಮುಂದಿದೆಯೇ ; | ಹೌದು |
| ಆ) | ಹಾಗಿದ್ದಲ್ಲಿ, ಸದರಿ ಪ್ರಸ್ತಾವನೆಯ ಲೆಕ್ಕಾ ಪುತ್ತೂರು ತಾಲ್ಲೂಕಿನಲ್ಲಿ ಎಷ್ಟು ಕಿಲೋಮೀಟರ್ ರಸ್ತೆಯನ್ನು ಮೇಲ್ದರ್ಜೆಗೇರಿಸಿ ಲೋಕೋಪಯೋಗಿ ಇಲಾಖೆಗೆ ಹಸ್ತಾಂತರಿಸಲಾಗಿದೆ? (ವಿವರ ನೀಡುವುದು) | ಮೇಲ್ದರ್ಜೆಗೇರಿಸುವ/ಕೆಳದರ್ಜೆಗಿಳಿಸುವ ಬಗ್ಗೆ ಸರ್ಕಾರವು ರಚಿಸಿರುವ ಸಮಿತಿಯು ಮೇಲಿನ ಪ್ರಸ್ತಾವನೆಗಳನ್ನು ಪರಿಶೀಲಿಸಿ, ಸರ್ಕಾರದ ಆದೇಶ ಸಂಖ್ಯೆ:ಲೋಇ:615:ಸಿಆರ್‌ಎಂ:2010, ದಿ:21.04.2010ರಲ್ಲಿನ ಮಾರ್ಗಸೂಚಿಗಳನ್ವಯ ಅರ್ಹತೆ ಹೊಂದಿರುವ ರಸ್ತೆಗಳನ್ನು ಮೇಲ್ದರ್ಜೆಗೇರಿಸುವ ಬಗ್ಗೆ ನಿರ್ಧರಿಸುವುದು. ತದನಂತರ ಮುಂದಿನ ಕ್ರಮ ವಹಿಸಲಾಗುವುದು. |

ಲೋಇ 10 ಸಿಕ್ಯೂಎನ್ 2019

(ಹೆಚ್.ಡಿ. ರೇವಣ್ಣ)
ಲೋಕೋಪಯೋಗಿ ಸಚಿವರು

# Karnataka Legislative Assembly

**15th Legislative Assembly 3rd Session**

| | | |
|---|---|---|
| Starred Question No | : | **966** |
| Name of the Legislative | : | **Sri. Sanjeeva Matandooru (Puttur)** |
| Date of Answer | : | 13.02.2019 |
| Minister intended to Answer | : | Hon'ble Minister for Public Works |

---

| Sl.No | Questions | Answers |
|---|---|---|
| 1 | Whether the Proposal for Upgradation of Village roads from PWD pertaining to Puttur Assembly Constituency is under consideration by the Govt? | Yes |
| 2 | If so, how many Kms of road have been upgraded & has been handed over to PWD(Enclose the details) | The Committee constituted for Upgrade / Downgradation of roads will examine the proposal & take decision based on the guidelines issued vide G.O. No. PWD 615 CRM 2010. Dated: 21.04.2010. Then further action will be taken. |

PWD 10 CQN 2019

**(H.D. REVANNA)**
Public Works Minister



ಕರ್ನಾಟಕ ಸರ್ಕಾರ

10 Stard 13/2/19

ಸಂಖ್ಯೆ: ನಅಇ 56 ಎಂಎನ್/ 2019

ಕರ್ನಾಟಕ ಸರ್ಕಾರದ ಸಚಿವಾಲಯ,
ವಿಕಾಸಸೌಧ,
ಬೆಂಗಳೂರು, ದಿನಾಂಕ: 12-02-2019.

**ಇವರಿಂದ,**

ಸರ್ಕಾರದ ಅಪರ ಮುಖ್ಯ ಕಾರ್ಯದರ್ಶಿ,
ನಗರಾಭಿವೃದ್ಧಿ ಇಲಾಖೆ,
ವಿಕಾಸಸೌಧ, ಬೆಂಗಳೂರು.

ಚುಕ್ಕೆ ಗುರುತಿನ ಪ್ರಶ್ನೆ

**ಇವರಿಗೆ,**

ಕಾರ್ಯದರ್ಶಿ,
ಕರ್ನಾಟಕ ವಿಧಾನ ಸಭೆ/ ~~ವಿಧಾನ ಪರಿಷತ್ತು~~,
ವಿಧಾನಸೌಧ, ಬೆಂಗಳೂರು.

**ಮಾನ್ಯರೇ,**

**ವಿಷಯ:** ಕರ್ನಾಟಕ ವಿಧಾನ ಸಭೆ/~~ವಿಧಾನ ಪರಿಷತ್ತಿನ~~ ಮಾನ್ಯ ಸದಸ್ಯರಾದ ಶ್ರೀ ಶಿವಶಂಕರ್ ಎಸ್.ಟಿ ರವರು ಮಂಡಿಸಿರುವ ಚುಕ್ಕೆ ಗುರುತಿನ/~~ಗುರುತಿಲ್ಲದ~~ ಪ್ರಶ್ನೆ ಸಂಖ್ಯೆ: 220 ಕ್ಕೆ ಉತ್ತರವನ್ನು ಕಳುಹಿಸಿಕೊಡುವ ಬಗ್ಗೆ.

* * * * *

ಮೇಲ್ಕಂಡ ವಿಷಯಕ್ಕೆ ಸಂಬಂಧಿಸಿದಂತೆ, ಕರ್ನಾಟಕ ವಿಧಾನ ಸಭೆ/~~ವಿಧಾನ ಪರಿಷತ್ತಿನ~~ ಮಾನ್ಯ ಸದಸ್ಯರಾದ ಶ್ರೀ ಶಿವಶಂಕರ್ ಎಸ್ ರವರು ಮಂಡಿಸಿರುವ ಚುಕ್ಕೆ ಗುರುತಿನ/~~ಗುರುತಿಲ್ಲದ~~ ಪ್ರಶ್ನೆ ಸಂಖ್ಯೆ: 220 ಕ್ಕೆ ಉತ್ತರದ 350 ಪ್ರತಿಗಳನ್ನು ಇದರೊಂದಿಗೆ ಲಗತ್ತಿಸಿ ತಮಗೆ ಕಳುಹಿಸಲು ನಿರ್ದೇಶಿತನಾಗಿದ್ದೇನೆ.

ತಮ್ಮ ನಂಬುಗೆಯ,

(ಆಂಜನಮೂರ್ತಿ)
ಸರ್ಕಾರದ ಅಧೀನ ಕಾರ್ಯದರ್ಶಿ (ಪ್ರ),
ನಗರಾಭಿವೃದ್ಧಿ ~~ಇಲಾಖೆ (ಬಿ.ಬಿ.ಎಂ.ಪಿ.)~~

ಕರ್ನಾಟಕ ವಿಧಾನ ಸಭೆ

1 ಚುಕ್ಕೆ ಗುರುತಿನ ಪ್ರಶ್ನೆ ಸಂಖ್ಯೆ : 220
2 ಸದಸ್ಯರ ಹೆಸರು : ಶ್ರೀ ಸೋಮಶೇಖರ್ .ಎಸ್.ಟಿ.
3 ಉತ್ತರಿಸುವ ದಿನಾಂಕ : 13-02-2019
4 ಉತ್ತರಿಸುವವರು : ಉಪ ಮುಖ್ಯಮಂತ್ರಿಗಳು

| ಕ್ರಸಂ | ಪ್ರಶ್ನೆ | ಉತ್ತರ |
|---|---|---|
| ಅ | ಯಶವಂತಪುರ ವಿಧಾನಸಭಾ ಕ್ಷೇತ್ರ ವ್ಯಾಪ್ತಿಯ ಬೃಹತ್ ಬೆಂಗಳೂರು ಮಹಾನಗರ ಪಾಲಿಕೆ ಪ್ರದೇಶದ ಬೀದಿ ದೀಪಗಳ ನಿರ್ವಹಣೆಗೆ ಸರ್ಕಾರ ತೆಗೆದುಕೊಂಡಿರುವ ಕ್ರಮಗಳೇನು; | ಬೃಹತ್ ಬೆಂಗಳೂರು ಮಹಾನಗರ ಪಾಲಿಕೆಯ ವತಿಯಿಂದ ಯಶವಂತಪುರ ವಿಧಾನಸಭಾ ಕ್ಷೇತ್ರದ ಬೃಹತ್ ಬೆಂಗಳೂರು ಮಹಾನಗರ ಪಾಲಿಕೆ ವ್ಯಾಪ್ತಿಯಲ್ಲಿ ಬರುವ 5 ವಾರ್ಡ್‌ಗಳಲ್ಲಿ ಬೀದಿ ದೀಪಗಳ ನಿರ್ವಹಣಾ ಕೆಲಸವನ್ನು ಒಟ್ಟು 13 ಪ್ಯಾಕೇಜ್‌ಗಳಾಗಿ ವಿಂಗಡಿಸಿ ದಿನಾಂಕ: 01-02-2017 ರಿಂದ ಟೆಂಡರ್ ಮೂಲಕ ಒಂದು ವರ್ಷದ ಅವಧಿಗೆ ಗುತ್ತಿಗೆ ನೀಡಲಾಗಿರುತ್ತದೆ. ಸದರಿ ಒಂದು ವರ್ಷದ ಗುತ್ತಿಗೆಯ ಅವಧಿಯು ಪೂರ್ಣಗೊಂಡಿದ್ದು, ಪಾಲಿಕೆಯ ಸಕ್ಷಮ ಪ್ರಾಧಿಕಾರದ ಅನುಮೋದನೆಯಂತೆ ನಿರ್ವಹಣಾ ಕೆಲಸದ ಗುತ್ತಿಗೆ ಅವಧಿಯನ್ನು ವಿಸ್ತರಿಸಿದ್ದು, ಪ್ರಸ್ತುತ ಸದರಿ ಗುತ್ತಿಗೆಯು ಚಾಲ್ತಿಯಲ್ಲಿರುತ್ತದೆ.<br><br>ಬೆಂಗಳೂರು ಅಭಿವೃದ್ಧಿ ಪ್ರಾಧಿಕಾರದ ವತಿಯಿಂದ ಯಶವಂತಪುರ ವಿಧಾನಸಭಾ ಕ್ಷೇತ್ರದ ಬೃಹತ್ ಬೆಂಗಳೂರು ಮಹಾನಗರ ಪಾಲಿಕೆ ವ್ಯಾಪ್ತಿಯಲ್ಲಿ ಬೆಂಗಳೂರು ಅಭಿವೃದ್ಧಿ ಪ್ರಾಧಿಕಾರದ ಬನಶಂಕರಿ 6ನೇ ಹಂತ ಮತ್ತು ಸರ್ ಎಂ. ವಿಶ್ವೇಶ್ವರಯ್ಯ ಬಡಾವಣೆಗಳನ್ನು ನಿರ್ಮಿಸಲಾಗಿರುತ್ತದೆ. ಸದರಿ ಬಡಾವಣೆಗಳು ಪ್ರಾಧಿಕಾರದ ವ್ಯಾಪ್ತಿಗೆ ಒಳಪಡುವುದರಿಂದ ಬೀದಿ ದೀಪಗಳ ನಿರ್ವಹಣೆಯನ್ನು ಬೆಂಗಳೂರು ಅಭಿವೃದ್ಧಿ ಪ್ರಾಧಿಕಾರದ ವತಿಯಿಂದಲೇ ನಿರ್ವಹಿಸಲಾಗುತ್ತಿರುತ್ತದೆ. |
| ಆ | ಬೀದಿ ದೀಪಗಳ ನಿರ್ವಹಣೆ ಮಾಡುವ ಗುತ್ತಿಗೆದಾರರಿಗೆ ವಿಧಿಸಲಾಗುತ್ತಿರುವ ಷರತ್ತುಗಳೇನು; (ವಿವರ ನೀಡುವುದು) | ಬೀದಿ ದೀಪಗಳ ನಿರ್ವಹಣೆ ಮಾಡುವ ಬಗ್ಗೆ ಗುತ್ತಿಗೆದಾರರಿಗೆ ಬೃಹತ್ ಬೆಂಗಳೂರು ಮಹಾನಗರ ಪಾಲಿಕೆಯ ವತಿಯಿಂದ ವಿಧಿಸಿರುವ ಷರತ್ತುಗಳು ಈ ಕೆಳಕಂಡಂತಿರುತ್ತವೆ:<br>1. ನಿರ್ವಹಣೆ ವಹಿಸಿಕೊಂಡಿರುವ ಗುತ್ತಿಗೆದಾರರು ಸುಟ್ಟಿರುವ ಮತ್ತು ದುರಸ್ಥಿಯಾಗಿರುವ ಬೀದಿ ದೀಪಗಳನ್ನು ದೂರು ಸ್ವೀಕರಿಸಿದ 24 ಗಂಟೆಗಳಲ್ಲಿ ಸರಿಪಡಿಸುವುದು. ತಪ್ಪಿದಲ್ಲಿ ದಂಡ ವಿಧಿಸಲಾಗುವುದು.<br>2. ಪ್ಯಾಕೇಜ್ ವ್ಯಾಪ್ತಿಯಲ್ಲಿ ಬರುವ ಬೀದಿ ದೀಪಗಳನ್ನು ಪ್ರತಿನಿತ್ಯ ಆನ್ & ಆಫ್ ಮಾಡುವುದು.<br><br>ಬೆಂಗಳೂರು ಅಭಿವೃದ್ಧಿ ಪ್ರಾಧಿಕಾರದ ವತಿಯಿಂದ ವಿಧಿಸಿರುವ ಷರತ್ತುಗಳು ಈ ಕೆಳಕಂಡಂತಿರುತ್ತವೆ:<br>1. ಗುತ್ತಿಗೆದಾರರು ಪ್ರಥಮ ದರ್ಜೆ ವಿದ್ಯುತ್ ಗುತ್ತಿಗೆದಾರರ ಪರವಾನಗಿಯನ್ನು ಸರ್ಕಾರದ ವಿದ್ಯುತ್ ಪರಿವೀಕ್ಷಣಾಲಯದಿಂದ ಪಡೆದಿರಬೇಕು. |

